ಪ್ರಕಾಶಕರು:....
ಬಿ. ಡಿ. ಅಕ್ಕಿ, ಬಿ.ಎ.,ಎಲೆಲ್.ಬಿ.,
"ಅರವಿಂದ ಗ್ರಂಥಮಾಲಾ"
ಹಲಸಂಗಿ.
(ಜಿಲ್ಲಾ:- ವಿಜಾಪೂರ.)

ಸಂಪಾದಕರು:-

'ಮಧುರ ಚೆನ್ನ'

ಮುದ್ರಕರು:-
ಎನ್. ಬಿ. ಕೆಂದೂರ,
ದಿ ಬಾಗಲಕೋಟ ಪ್ರಿಂಟಿಂಗ್ ವರ್ಕ್ಸ್,
ಬಾಗಲಕೋಟ.

# ಪರಿವಿಡಿ.



## ಅಭಿವಂದನ

ವಿದ್ಯಾ ಪಕ್ಷಪಾತಿಗಳೂ, ಉದಾರ ಚರಿತರೂ
ಆಗಿದ್ದ ಕೈ. ವಾ. ಶ್ರೀಮಂತ ಸರದಾರ
**ಸಂಗಪ್ಪ ಸರದೇಸಾಯಿಯರು ರಕ್ಕಸಗಿ**
ಇವರ ಪೂಜ್ಯಸ್ಮರಣೆಗಾಗಿ

ಅವರ ಸತ್ಪುತ್ರರಾದ
ಶ್ರೀಮಂತ **ಕೆಂಚನಗೌಡಾ** ಉರ್ಫ್
**ಬಾಬಾಸಾಹೇಬ ಸರದೇಸಾಯಿ ರಕ್ಕಸಗಿ**
(ವಿಜಾಪೂರ) ಇವರು ಪ್ರಸ್ತುತ ಗ್ರಂಥ
ಪುಷ್ಪವನ್ನರಳಿಸಲು ಸಕಾಲಕ್ಕೆ ಸಂಪೂರ್ಣ
ಸಹಾಯ ಮಾಡಿದ್ದಕ್ಕಾಗಿ ಅಂತಃಕರಣಪೂರ್ವಕ
ವಂದನೆಗಳನ್ನು ಅರ್ಪಿಸುತ್ತೇವೆ.



## ಮುಂದಿನ ಪುಸ್ತಕ



ರಸಭರಿತ ಕಾದಂಬರಿ

# " ಬಂಧನದ ಆಚೆ "

ಭಾಗ ೧



**ನವ್ಹಂಬರ ತಿಂಗಳ ಕೊನೆಯಲ್ಲಿ**

Aum

# ನಮ್ಮ ಮಾತು

---

"ಭಾರತೀಯ ನವಜನ್ಮ"ವೆಂಬ ಈ ಪ್ರಸ್ತುತ ಗ್ರಂಥವು ರಾಜಕೀಯ ಚಳವಳಿಗೆ ಎಳ್ಳಷ್ಟೂ ಸಂಬಂಧಿಸಿದ್ದಲ್ಲ. ಯಾವ ಸಾಮಾಜಿಕ ತಂಟೆಗೂ ಇದರ ಸಂಬಂಧವಿಲ್ಲ. ಕೇವಲ ಭರತಖಂಡದ ಸಾಂಸ್ಕೃತಿಕ ವಿಚಾರವು ಇದರ ಹೆಗ್ಗುರಿಯು.

ಸ್ವತಃ ಯೋಗೀಶ್ವರ ಅರವಿಂದರು ರಾಜಕಾರಣವನ್ನೂ ಸಮಾಜ ಸುಧಾರಣೆಯನ್ನೂ ಪರಿತ್ಯಜಿಸಿ ಜಗತ್ಕಲ್ಯಾಣಕ್ಕಾಗಿ ಕೇವಲ ಯೋಗ ನಿರತರಾಗಿದ್ದಾರೆ. ಇದರ ಕಾರಣವನ್ನು ಅವರು ತಮ್ಮ ಎಷ್ಟೋ ಲೇಖನಗಳಲ್ಲಿ ಉಲ್ಲೇಖಿಸಿದ್ದಾರೆ.

"The whole heart and action and mind of man must be changed, but from within, not from without, not by political and social institutions, not even by creeds and philosophies, but by realisation of God in ourselves and the world and a remoulding of life by that realisation. This can only be effected by Poorna Yoga."

"ಮಾನವನ ಹೃದಯ, ಬುದ್ಧಿ ಮತ್ತು ಕೃತಿ ಇವುಗಳೆಲ್ಲವೂ ಸಂಪೂರ್ಣವಾಗಿ ಮಾರ್ಪಡಬೇಕು. ಅದರ ಹೊರಗಿನಿಂದಲ್ಲ, ಒಳಗಿನಿಂದಲೇ ಬದಲಾಗಬೇಕು. ರಾಜಕೀಯ ಅಥವಾ ಸಾಮಾಜಿಕ ಸತ್ರಗಳಿಂದಲ್ಲ; ಅಷ್ಟೇ ಏಕೆ ಧರ್ಮ ಶ್ರದ್ಧೆ ಮತ್ತು ತತ್ವವಿಚಾರಗಳಿಂದಲೂ ಸಹ ಅಲ್ಲ. ಅದರ ನಮ್ಮೊಳಗಿನ ಹಾಗೂ ಜಗತ್ತಿನೊಳಗಿನ ದೇವನನ್ನು ಸ್ವಾನುಭವಿಸಿ, ಆ ಅನುಭವ ಮೂಲಕವಾಗಿ ಜೀವನವನ್ನು ತಿರುಗಿ ಎರಕ ಹೊಯ್ಯುವದರಿಂದ ಮಾತ್ರ ಆ ಮಾರ್ಪಾಡಾಗಬೇಕು. ಇದು ಕೇವಲ 'ಪೂರ್ಣಯೋಗ'ದ ಸಾಧನೆಯಿಂದ ಮಾತ್ರ ಫಲಿಸಬಲ್ಲದು."

ಹೀಗೆಂತಲೇ ಶ್ರೀ ಅರವಿಂದರು ತಮ್ಮ ಆಶ್ರಮದಲ್ಲಿ ವಿಧಿಸಿದ ನಿ ಯ ಮ ವಿ ದು :—

"The Ashrama is not a political institution; all association with political activities is renounced by those who live here. All propaganda, religious, political or social, has to be eschewed by the inmates." "ಆಶ್ರಮವೇನೂ ರಾಜನೀತಿಕ ಸಂಸ್ಥೆಯಲ್ಲ. ಇಲ್ಲಿ ಇರುವವರಿಗೆ ರಾಜನೀತಿಕ ಕರ್ಮಗಳ ಸರ್ವವಿಧವ ಸಂಪರ್ಕವು ನಿಷಿದ್ಧವಾಗಿದೆ. ಆಶ್ರಮವಾಸಿಗಳು ಧಾರ್ಮಿಕ, ರಾಜನೀತಿಕ, ಸಾಮಾಜಿಕ ಮುಂತಾದ ಸರ್ವವಿಧದ ಪ್ರಚಾರ ಕಾರ್ಯಗಳಿಂದ ಅಲಿಪ್ತರಾಗಿರಬೇಕಾಗುತ್ತದೆ."

೧೯೦೮ರಲ್ಲಿ ಸರ್ವತ್ರ ವಾಸುದೇವನ ಸಾಕ್ಷಾತ್ಕಾರವಾದಾಗಲೇ ಶ್ರೀ ಅರವಿಂದರಿಗೆ ಭಗವತ್ಸಂದೇಶವುಂಟಾಗಿ "ಭಾರತದ ಉನ್ನತಿಯು ಅದರ ಸನಾತನ ಅಧ್ಯಾತ್ಮದಲ್ಲಿದೆ" ಎಂಬ ಮೂಲ ಸೂತ್ರವು ಪ್ರಕಟವಾಗಿದ್ದಿತು. ಮುಂದೆ ೧೯೨೦ರಲ್ಲಿ ಬರೆದ ಒಂದು ಪತ್ರದಲ್ಲಿ ಅವರು ಇದೇ ಮಾತನ್ನು ವಿವರಿಸಿದ್ದು ಹೀಗಿದೆ:—

"ನಾನು ರಾಜಕಾರಣವನ್ನು ಬಿಟ್ಟದ್ದು ಏಕೆ? ನಮ್ಮ ರಾಜನೀತಿಯು ಭರತಖಂಡದ ಮೌಲಿಕ ವಸ್ತುವಲ್ಲದ್ದರಿಂದಲೇ. ಅದು ವಿಲಾಯತಿಯ ಖರೀದಿ. ವಿಲಾಯತೀ ರೀತಿಯ ಅನುಕರಣ ಮಾತ್ರ. ಆದರೆ ಈಗ ನೆರಳನ್ನು ತೊರೆದು ಮೂಲವಸ್ತುವನ್ನು ಹಿಡಿದುಕೊಳ್ಳುವ ಕಾಲವು ಬಂದಿದೆ. ಭಾರತದ ನಿಜಪ್ರಾಣವನ್ನು ಎಚ್ಚರಿಸಿ ಸರ್ವ ಕಾರ್ಯವನ್ನು ಅವಕ್ಕೆ ಅನುರೂಪವಾಗಿಯೇ ಮಾಡಲಿಕ್ಕೆಬೇಕು. ಜನರು ಈಗ ರಾಜನೀತಿಗೆ ಅಧ್ಯಾತ್ಮ ಸ್ವರೂಪವನ್ನು ಕೊಡಲಿಚ್ಛಿಸುತ್ತಿದ್ದಾರೆ. ಅದರ ಫಲದಿಂದ ಬಹಳವಾದರೆ ಭಾರತೀಯ ರೂಪ ತಾಳಿದ ಬೋಲ್ಶೆವಿಜಮ್ ಮಾತ್ರ ಹುಟ್ಟಬಹುದು. ಅದರೆ ಇದು

ಮೌಲಿಕವಸ್ತುವಲ್ಲ. ಅಶುದ್ಧ ಸ್ವರೂಪದೊಳಗೆ ಅಧ್ಯಾತ್ಮವನ್ನು ಬೆರೆಸಿದರೆ ಹಸಿಯ ಕೊಡದಲ್ಲಿ ಚುರುಕಾದ ಸೆರೆಯನ್ನು ಸುರುವಿದ ಹಾಗೆ. ಅದರಿಂದ ಆ ಹಸಿಯ ಕೊಡವು ಒಡೆದು ಜಲವೆಲ್ಲ ಸೋರಿ ಹೋಗಬಹುದು; ಅಥವಾ ಅಧ್ಯಾತ್ಮ ಶಕ್ತಿಯೆಲ್ಲ ಇಂಗಿ ಹೋಗಿ ಮುಂಚಿನ ಅಶುದ್ಧ ರೂಪವೇ ಉಳಿದರೂ ಉಳಿಯ ಬಲ್ಲದು.”

ಒಂದೊಂದು ರಾಷ್ಟ್ರಕ್ಕೆ ಒಂದೊಂದು ರಕ್ತಗತ ಸ್ವಭಾವವಿರುತ್ತದೆ. ಅದಕ್ಕನುಗುಣವಾಗಿ ಅನಾದಿ ಕಾಲದಿಂದ ಅಲ್ಲಿ ಮೈದಾಳಿದ ವಿವಿಧ ರಚನೆಯೇ ಆಯಾ ರಾಷ್ಟ್ರದ ಸಂಸ್ಕೃತಿ. ಸಂಸ್ಕೃತಿಯು ಸ್ವಭಾವದ ಚಿತ್ರವಿದ್ದಂತೆ. ಸಾಂಸ್ಕೃತಿಕ ವಿಮರ್ಶೆಯು ಆಯಾ ನಾಡಿನ ಸ್ವಭಾವವನ್ನು ನಿರ್ಣಯಿಸುವ ನಾಡಿ ಯಂತ್ರವಿದ್ದಹಾಗೆ. ನಾಡಿಯನ್ನು ನೋಡದೆ ಔಷಧವನ್ನು ವ್ಯವಹರಿಸುವುದರಿಂದ ಆಗುವ ಪ್ರಮಾದವೇ ರಾಷ್ಟ್ರಸ್ವಭಾವವನ್ನರಿಯದೆ ಹೂಡುವ ನವರಚನೆಗಳಿಂದಲೂ ಆಗುವದು. ಶ್ರೀ ಅರವಿಂದರಿಗೆ ಭರತಖಂಡದ ನಾಡಿಯನ್ನು ಸ್ವಯಂ ಭಗವಂತನೇ ಯೋಗ ಮುಖದಿಂದ ತೋರಿಸಿಕೊಟ್ಟಿರುವನೆಂದು ಸ್ವತಃ ಅವರೇ “ಉತ್ತರ ಪಾರಾ ಉಪನ್ಯಾಸ’’ದಲ್ಲಿ ಹೇಳಿದ್ದಾರೆ.

ಅಧ್ಯಾತ್ಮವೇ ಭರತಖಂಡದ ಪಂಚಪ್ರಾಣವು. ಆದರೆ ಜೀವನವನ್ನು ತಿರಸ್ಕರಿಸುವ ಮಾಯಾವಾದದ ವೇದಾಂತವು ಭಾರತದ ಅನಾದಿ ಕಾಲದ ಸರ್ವಸ್ವವಲ್ಲ. ಆದರೆ ನಿಜವಾಗಿ ನೋಡಿದರೆ ಪ್ರತಿಯೊಂದು ಜೀವಕ್ಕೆ ಮೂಲ ಬೀಜವಾಗಿರುವ ಆತ್ಮವೆಂಬುದು ತನ್ನ ವೈಯಕ್ತಿಕ ಪ್ರಪಂಚದಲ್ಲಿ ವಿಶ್ವ ಪ್ರಪಂಚದ ಪ್ರಭುವಾದ ದೇವಾಧಿ ದೇವನಷ್ಟೇ ಅಘಟಿತ ಘಟನೆಯನ್ನು ನಡಿಸಬಲ್ಲದೆಂಬುದನ್ನು ಕಂಡುಂಡು ಸಾರಿದ ಕಡುಗಲಿಗಳೆಂದರೆ ಭಾರತೀಯ ಋಷಿಸಂತಾನವೇ.

## ನಮ್ಮ ಮಾತು

ಭರತಖಂಡದಲ್ಲಿ ಯಾವುದನ್ನು ನಿರ್ಮಿಸಿದವರೂ ಋಷಿಮುನಿಗಳೇ. ವೈದ್ಯಶಾಸ್ತ್ರವನ್ನು ನಿರ್ಮಿಸಿದವನು ಚರಕಮುನಿಯು, ನಾಟ್ಯಶಾಸ್ತ್ರವನ್ನು ನಿರ್ಮಿಸಿದವನು ಭರತ ಮುನಿಯು, ಕಾಮಶಾಸ್ತ್ರವನ್ನು ಬರೆದ ವಾತ್ಸ್ಯಾಯನನೂ ಸಹ ಮುನಿಯೇ. ಹಿಂದುಸ್ಥಾನದಲ್ಲಿ ಎಲ್ಲ ವಿದ್ಯೆಗಳ ಉತ್ಪಾದಕರು ಋಷಿಮುನಿಗಳು. ಅವರ ಸರ್ವ ಲೌಕಿಕ ಶಾಸ್ತ್ರಗಳಿಗೂ ವೇದಗಳಂತೆ ಸಂಹಿತೆಗಳೆಂದೇ ಹೆಸರಿದೆ.

ಯೋಗಶಕ್ತಿಯಿಂದಾದರೆ ಎಂಥೆಂಥ ಅಘಟಿತ ವಿದ್ಯೆಗಳನ್ನು ಎಷ್ಟು ವಿಪುಲವಾಗಿ ಗಳಿಸಬಹುದೆಂಬುದರ ಒಂದು ಯಾದಿಯನ್ನೇ ನಾವು ಭಗವಾನ್ ಪತಂಜಲಿ ಮುನಿಯ ಯೋಗಸೂತ್ರಗಳ ಮೂರನೆಯ ಅಧ್ಯಾಯದಲ್ಲಿ ಕಾಣಬಹುದು. ಹೀಗೆಂತಲೇ ಶ್ರೀ ಅರವಿಂದರು ಇನ್ನು ಮುಂದೆ ನಾವು ಏನು ಮಾಡಬೇಕಾದರೂ ಯೌಗಿಕ ದಿವ್ಯ ಜ್ಞಾನದಿಂದಲೇ ಹೊರತು ವಸ್ತುವಿನ ಹೊರಮುಗ್ಗಲನ್ನು ಮಾತ್ರ ಕಾಣುವ ಸಾಧಾರಣ ಬುದ್ಧಿಯಿಂದಲ್ಲವೆಂದು ನಿರ್ಧರಿಸಿದ್ದಾರೆ.

ಇಂದು ಏನು ಮಾಡಬೇಕೆನ್ನುವವನೂ ಎಲ್ಲಕ್ಕೂ ಮೊದಲಿಗೆ ಋಷಿಯಾಗಲು ಬೇಕು. ಭಾರತ ಸಂಸ್ಕೃತಿಯ ಈಗಿನಂಥವೇ ಒಂದು ಸಂಧಿಕಾಲದಲ್ಲಿ ಮೆರೆದ ಮಹಾ ಕವಿಯಾದ ಕಾಳಿದಾಸನು ಚಿತ್ರಿಸಿದ ಮಹರ್ಷಿ ಕಣ್ವರ ಆಶ್ರಮದಲ್ಲಿ ನಡೆದ ಋಷಿಕುಲದ ಒಂದು ಸಂಭಾಷಣವನ್ನಿಲ್ಲಿ ಕೇಳಿರಿ: —

ಋಷಿ:—" ವನೌಕಸೋಽಪಿ ಸಂತೋ ಲೌಕಿಕಜ್ಞಾ ವಯಮ್ । "

**( ಅರಣ್ಯವಾಸಿಗಳಾದರೂ ಸಹ ನಾವು ಲೌಕಿಕವನ್ನು ಬಲ್ಲೆವು. )**

ಶಿಷ್ಯ:— "ನ ಖಲು ಧೀಮತಾಂ ಕಶ್ಚಿತ್ ಅವಿಷಯೋ ನಾಮ"
**( ಮೇಧಾವಿಗಳಿಗೆ ಅರಿಯದ ವಿಷಯವೇ ಇಲ್ಲ. )**

ಹಿಂದುಸ್ಥಾನದ ಭಾವೀ ಉನ್ನತಿಯು ಅದರ ಈ ಸನಾತನವಾದ ಆಧ್ಯಾತ್ಮಿಕ ಸ್ವಭಾವದ ಜಾಗ್ರತಿಯನ್ನೇ ಅವಲಂಬಿಸಿದೆಯೆಂದು ಶ್ರೀ ಅರವಿಂದರು ಮನಗಂಡಿದ್ದಾರೆ. ಇದಕ್ಕನುಗುಣವಾಗಿ ಆಧುನಿಕ ಹಿಂದುಸ್ಥಾನದಲ್ಲಿ ತೀವ್ರವಾಗಿಯೇ ಬೇರೆ ಬೇರೆ ವಿಷಯಗಳೊಳಗೆ ಈ ಸ್ವಸ್ವರೂಪದ ಜೀವನಾಡಿಯು ಅಸ್ಪಷ್ಟವಾಗಿದ್ದರೂ ಮಿಡುಕ ಲಾರಂಭಿಸಿದೆಯೆಂಬುದನ್ನೇ ಪ್ರಸ್ತುತ ಗ್ರಂಥದಲ್ಲಿ ಯೋಗೀಶ್ವರರು ವಿಮರ್ಶಿಸಿದ್ದಾರೆ.

ಶ್ರೀ ಅರವಿಂದರು ಎಷ್ಟೋ ವರ್ಷ ಮೊದಲಿಗೆ ಈ ಗ್ರಂಥವನ್ನು ೧೯೧೮ರಲ್ಲಿ ತಮ್ಮ ಆರ್ಯ ಪತ್ರಿಕೆಯೊಳಗೆ ಕ್ರಮಶಃ ಪ್ರಕಟಿಸಿದ್ದರು. ಇದೇ ವಿಷಯದ ಮೇಲೆ ಇದೇ ಹೆಸರಿನ ಜೇಮ್ಸ್, ಎಚ್. ಕಜಿನ್ಸ್ರೆಂಬ ವಿಶ್ವವಿಖ್ಯಾತ ವಿಚಾರಿಗಳು ಬರೆದ ಪುಸ್ತಕದ ಪುರಸ್ಕಾರ ( Appreciation ) ರೂಪದಲ್ಲಿ ಅರವಿಂದರು ಇದನ್ನು ಬರೆದರು. ಇಂಥ ಅಮೌಲ್ಯ ಗ್ರಂಥವನ್ನು ಕನ್ನಡ ತಾಯಿಯ ಚಿನ್ನವಡಿಗಳಿಗೆ ಅರ್ಪಿಸಲಿಕ್ಕೆ ನಮಗೆ ಸ್ವಯಂ ಯೋಗೀಶ್ವರರು ಒಪ್ಪಿಗೆಯನ್ನಿತ್ತು ಅನುಮೋದಿಸಿದ್ದು ನಮ್ಮ ನಾಡಿನದೇ ಭಾಗ್ಯವೆಂದು ನಾವು ನಂಬಿದ್ದೇವೆ.

ಇನ್ನು ಎರಡನೆಯ ಮಾತಾವುದೆಂದರೆ— ಈ ಗ್ರಂಥವನ್ನು ಕನ್ನಡಿಸಿಕೊಡಬೇಕೆಂದು ಮೊದಲಿಗೆ ನಾವು ನಮ್ಮ ಮಾನನೀಯರಾದ ಶ್ರೀಮಾನ್ ಕೊಣ್ಣೂರ ಹಣಮಂತರಾಯರು ಎಂ. ಎ. ಅವರಿಗೆ ಬಿನ್ನವಿಸಿಕೊಂಡಿದ್ದೆವಷ್ಟೇ? ಆದರೆ ಆಕಸ್ಮಾತ್ತಾಗಿ ಅವರ ವಿದ್ಯಾಲಯದ ಕಾರ್ಯಕಲಾಪವು ಅತಿಶಯವಾಗಿ ಹೆಚ್ಚಿದ್ದರಿಂದ ವಿರಾಮವಿಲ್ಲದೆ

ಅವರು ಭಾಷಾಂತರದ ಕೆಲಸವನ್ನು ಬದಿಗಿರಿಸಬೇಕಾದ್ದರಿಂದ ನಮ್ಮ ಗೆಳೆಯರಾದ ಶ್ರೀಮಾನ್ ಜೋಂಪ್ರೆಯವರು ಎಂ. ಎ. ಅವರಿಗೆ ಈ ಭಾರವನ್ನು ಅವಸರದ ಹೊತ್ತಿನಲ್ಲಿ ಹೊರಿಸಬೇಕಾಯಿತು, ಇದರಲ್ಲಿ ನಾಡತಾಯಿಯ ಇನ್ನೊಂದು ಉದ್ದೇಶವು ಅವಿದಿತವಾಗಿ ನೆರವೇರಿತೆಂದು ನನಗೆ ಅನಿಸುತ್ತದೆ. ಅದೇನೆಂದರೆ ಕನ್ನಡನಾಡಿನಲ್ಲಿ ಅರವಿಂದರ ತತ್ವಗಳನ್ನು ಉಂಡು ಉಸುರಿ, ಬಿತ್ತಿ ಬೆಳೆದ ಮೊದಲಿಗರೆಂದರೆ ಗ|| ಜೋಂಪ್ರೆಯವರೇ. ಹೀಗಿರುವದರಿಂದ ಕನ್ನಡತಾಯಿಗೆ ಅರವಿಂದರ ಮೊಟ್ಟ ಮೊದಲಿನ ಅಲಂಕಾರವು ಅವಳ ಈ ಮುದ್ದು ಕುವರನಿಂದಲೇ ಅರ್ಪಿತವಾಗತಕ್ಕದ್ದು ನ್ಯಾಯವಲ್ಲವೆ? ಶ್ರೀಮಾನ್ ಕೊಣ್ಣೂರರವರಿಗೆ ಪ್ರಸ್ತುತ ಪುಸ್ತಕದ ಲೇಖನಕ್ಕೆ ಅವಕಾಶ ದೊರೆಯದಿದ್ದರೂ ಇವರ ಪ್ರಕಾಶನ ಕಾರ್ಯಕ್ಕೆ ಅವರು ಇನ್ನುಳಿದ ರೀತಿಯಿಂದ ಅತಿಶಯವಾಗಿ ನೆರವಾದ್ದರಿಂದ ನಾವು ಅವರಿಗೆ ತುಂಬಾ ಉಪಕೃತರಾಗಿದ್ದೇವೆ.

ಇಷ್ಟೆಲ್ಲ ಆಗುವದರೊಳಗಾಗಿ ಈ ಪುಸ್ತಕವನ್ನು ಹೊರಡಿಸುವುದಕ್ಕೆ ಬಹಳ ತಡವಾಗಿಬಿಟ್ಟದ್ದರಿಂದ ನಮ್ಮ ವಾಚಕ ಮಹಾಶಯರು ನಮ್ಮ ಈ ಅನಿವಾರ್ಯವಾದ ವಿಲಂಬವನ್ನು ಕ್ಷಮಿಸುವರೆಂದು ನಂಬಿದ್ದೇವೆ.

ಪ್ರಸ್ತುತ ಗ್ರಂಥದ ಕರೆಕ್ಶನ್ನಿನ ಭಾರವನ್ನು ವಹಿಸಿ ನಮಗೆ ಅತಿಶಯವಾಗಿ ನೆರವಾದ ಬಾಗಲಕೋಟೆಯ ವಿದ್ಯಾಪ್ರಸಾರಕ ಮಂಡಳದ ಶ್ರೀಮಾನ್ ಹನುಮಸಾಗರ ಮಾಸ್ತರರಿಗೆ ನಾವು ಕೃತಜ್ಞರಿದ್ದೇವೆ.

ನಾವು ಕೇಳಿದ ಕೂಡಲೆ ಶ್ರೀ ಅರವಿಂದರ ಸುಂದರವಾದ ಚಿತ್ರವನ್ನು ನಮ್ಮ ಈ ಗ್ರಂಥಕ್ಕಾಗಿ ಕಲಕತ್ತೆಯಲ್ಲಿ ಮುದ್ರಿಸಿ ಕಳಿಸಿದ ಶ್ರೀ ರಾಮೇಶ್ವರ ಆಂಡ್ ಕಂಪನಿ, ಚಂದ್ರನಗರ ಇವರಿಗೆ ಋಣಿಯಾಗಿದ್ದೇವೆ.

# ಮುನ್ನುಡಿ.

---

ಶ್ರೀ ಅರವಿಂದರು ಬರೆದ 'ರಿನೇಸಾನ್ಸ ಇನ್ ಇಂಡಿಯಾ' ಎಂಬ ಪುಸ್ತಕವು ಪುಸ್ತಕರೂಪದಲ್ಲಿ ಇ. ಸ. ೧೯೨೦ ರಲ್ಲಿ ಪ್ರಕಟವಾಗುವ ಮೊದಲು ಇ. ಸ. ೧೯೧೮ ರಲ್ಲಿ ಅವರ ಆರ್ಯ ಮಾಸಪತ್ರಿಕೆಯಲ್ಲಿ ನಾಲ್ಕು ಭಾಗಗಳಲ್ಲಿ ಪ್ರಕಾಶಗೊಂಡಿತು. ಮೂಲವಲ್ಲಿ, ಇನ್ನೊಂದು ಗ್ರಂಥದ ವಿಮರ್ಶೆಯೆಂದು ಬರೆದ ಲೇಖನಗಳ ಸಂಗ್ರಹವಿದು. ಮಿ. ಜೆ. ಎಚ್. ಕಝಿನ್ಸರವರು ಇದೇ ಹೆಸರಿನ ಒಂದು ಪುಸ್ತಕವನ್ನು ಬರೆದು, ಭಾರತೀಯ ಸಂಸ್ಕೃತಿಯನ್ನು ಕೊಂಡಾಡಿ, ಸದ್ಯದ ಭಾರತದಲ್ಲಿ ಪ್ರಾಚೀನ ಸಂಸ್ಕೃತಿಯ ಪುನರ್ಜನ್ಮವೆತ್ತಲಿದೆ ಎಂದು ಅದರ ಉದಯರಾಗವನ್ನು ಹಾಡಿದ್ದರು. ಶ್ರೀ ಅರವಿಂದ ಘೋಷರು ಪ್ರಾಚೀನ ಸಂಸ್ಕೃತಿಯಸಾರ, ಪುನರ್ಜನ್ಮದ ಲಕ್ಷಣ, ಹಾಗು ವರ್ತಮಾನಕಾಲದ ಗುಣದೋಷಗಳು ಇವುಗಳ ಮಾರ್ಮಿಕವಾದ ಚರ್ಚೆಯನ್ನು ಅವರ ವಿಮರ್ಶಾವಸನದಲ್ಲಿ ಮಾಡಿದ್ದಾರೆ. ವಿಮರ್ಶೆಗಳನ್ನೆ ಬೆಳೆಸಿ ಗ್ರಂಥಗಳನ್ನಾಗಿ ಮಾಡುವದು ಶ್ರೀ ಅರವಿಂದರದೊಂದು ರೀತಿಯಾಗಿದೆ. ಇದೇ ರೀತಿಯಲ್ಲಿ 'A Defence of Indian Culture' 'ಭಾರತೀಯ ಸಂಸ್ಕೃತಿಯ ಸಮರ್ಥನೆ' 'The Future Poetry' 'ಬರಲಿರುವ ಕಾವ್ಯಕೃತಿ' 'ಹೆರಾಕ್ಲಿಟಸ್' ಮೊದಲಾದ ಲೇಖನಾವಲಿಗಳನ್ನು ಬರೆದಿದ್ದಾರೆ ಅವರು. ಒಂದೊಂದು ವಿಮರ್ಶೆ ಬೆಳೆದು ಗ್ರಂಥಕಾರವಾದವುಗಳು. ಮೂಲ ಲೇಖನಗಳು ಡಾ. ಕಝಿನ್ಸ; ಸರ, ಜಾನ್ ವುಡ್ರಾಫ್; ಮಿ. ಆರ್ಚರ; ಪ್ರೊ. ರಾನಡೆ ಮೊದಲಾದ ವಿದ್ವಾಂಸರಿಂದ ಬರೆಯಲಾದವುಗಳು. ಅವರ ಮೇಲೂ ತಮ್ಮ ಮುದ್ರೆಯೊತ್ತಿ ತಮ್ಮ ವಿಚಾರದ

ಅಸಾಧಾರಣ ಸ್ವರೂಪವನ್ನು ಬೆಳಗಿಸುವ ಶ್ರೀ ಅರವಿಂದರ ಶೈಲಿಯೂ ಅಸಾಧಾರಣವಾದುದೇ ಇದೆ.

ಶ್ರೀ ಅರವಿಂದರ ಶೈಲಿಯು ಪಂಡಿತರಿಗೂ ತಲೆತುರಿಸ ಹಚ್ಚುವದು, ತಲೆಕೆಡಿಸುವದು, ತಲೆದೂಗಿಸುವದು. ಅವರ ವಾಕ್ಯರಚನೆಯು ವ್ಯೂಹ ವ್ಯೂಹವಾದ ದೇಹರಚನೆಯಿದ್ದಂತೆ. ಅದನ್ನು ಬಿಡಿಸುವದೆಂದರೆ ವ್ಯಾವಹಾರಿಕ ಅಪೂರ್ಣಾಂಕದ ಸಂಕೀರ್ಣವಾದ ಜಟಿಲ ಪ್ರಶ್ನೆಯೊಂದನ್ನು ಬಿಡಿಸಿದಂತೆ. ಪುಟ, ಎರಡು ಪುಟಗಳನ್ನು ತುಂಬಿಕೊಂಡು ಹಬ್ಬಿನಿಂತ ಅವರ ವಾಕ್ಯಗಳ ಅರ್ಥವು ತಿಳಿದ ಮೇಲೆ ಅದರ ಕಟ್ಟಡದ ಮಾಟವು ಅನೇಕ ಭುವನೇಶ್ವರಿಗಳುಳ್ಳ ಜಕ್ಕಣಾಚಾರ್ಯರ ಭವ್ಯ ಗುಡಿಗಳಂತೆ ರಮ್ಯವಾಗಿ ತೋರುವದು. ಪರಿವಾರ ದೇವತಾ ಪ್ರಭಾವಳಿಯೊಡನೆ ಪ್ರತಿಷ್ಠಾಪನೆ ಹೊಂದಿದ ವಿಗ್ರಹದಂತೆ ಅವರ ವಿಚಾರಗಳು ಸಕಲ ಅಂಗೋಪಾಂಗಗಳೊಡನೆ ಕಿರಿದರಲ್ಲಿಯೂ ಹಿರಿದಾಗಿ ಪ್ರಕಾಶಿಸುವವು. ದಿಗ್ವಿಜಯಕ್ಕೆ ಹೊರಟ ಚತುರಂಗ ಬಲಸನ್ನಾಹಸಮೇತ ರಾಜನಂತೆ ಅವರ ಒಂದೊಂದು ವಾಕ್ಯಗಳು ಸಮಗ್ರ ಗ್ರಂಥದ ಸಾರವನ್ನು ಹೀರಿ ವಜ್ರದ ಸಾಮರ್ಥ್ಯವನ್ನು ಪಡೆದಿರುವವು; ಸಹಸ್ರದಲ ಕಮಲದಂತೆ ಸಕಲಾರ್ಥವನ್ನು ಸಂಗ್ರಹಿಸಿರುವವು, ಪ್ರಕಟಿಸಬಲ್ಲವು. ಅವರ ಶೈಲಿಯಲ್ಲಿ ವಾದಿಗಳ ವಿಚಾರಾವೇಶ, ವಾಗ್ಮಿಗಳ ಶಬ್ದಸಿದ್ಧಿ, ಕವಿಗಳ ಪ್ರತಿಭೆ ಇವೆಲ್ಲವೂ ಕೂಡಿರುವವು. ನನ್ನ ಭಾಷಾಂತರವು ಅವರ ಛಾಯೆ ಮಾತ್ರ.

ಸಾಮಾನ್ಯರಿಗೂ ತಿಳಿಯಬೇಕೆಂಬ ಉದ್ದೇಶವನ್ನಿಟ್ಟುಕೊಂಡು ಭಾಷಾಂತರವನ್ನು ಭಾಷ್ಯವನ್ನಾಗಿ ವಿಸ್ತರಿಸಬಹುದಾಗಿತ್ತು. ಆದರೆ ಶ್ರೀ ಅರವಿಂದರ ಮೂಲವಸ್ತುವನ್ನೆ ಕೊಡಬೇಕೆಂದು ಉದ್ದೇಶವಿಟ್ಟುಕೊಂಡಿರುವದರಿಂದ ಅದು ಪ್ರಸ್ತುತವಲ್ಲ. ಅವರ ವಾಕ್ಯಗಳು ಹುರಿಯನ್ನು ಬಿಚ್ಚಿ ಅದನ್ನು ಎಳೆ ಎಳೆಯಾಗಿ, ನೂಲು ನೂಲಾಗಿ ಹಿಂಜಬಹುದಾಗಿತ್ತು. ಅದರಿಂದಲೂ ಮೂಲ ಲೇಖಕರ ವಾಕ್ಯಗೌರವಕ್ಕೆ

ಹಾನಿತಟ್ಟುವಂತೆ ಇತ್ತು. ಅಂತೆಯೆ ಹಾಗೆ ಮಾಡಲಿಲ್ಲ. ಇನ್ನೇನು? ತೀರ ತೊಡಕಿನ ವಾಕ್ಯಗಳನ್ನು ಸ್ವಲ್ಪ ಬಿಡಿಸಿದೆ, ಕನ್ನಡದ ರೀತಿಗೆ ಸರಿಹೋಗುವಂತೆ ಒಪ್ಪೊಪ್ಪು ಮಾರ್ಪಡಿಸಿದೆ. ಆದರೂ ವಾಚಕರು ಇದೊಂದು ಉಪನ್ಯಾಸವೆಂದು ತಿಳಿದು ಯುಕ್ತಧ್ವನಿಯಿಂದಲೂ, ಸಾಕಷ್ಟು ವಿರಾಮಗಳಿಂದಲೂ ಮತ್ತೆ ಮತ್ತೆ ಓದಿಕೊಂಡರೆ ಇವರೊಳಗಿನ ಯಾವ ಭಾಗವೂ ತೀರ ಅರ್ಥವಾಗದೆ ಹೋಗಲಾರದು. ಇಷ್ಟಾಗಿಯೂ ಶ್ರೀ ಅರವಿಂದರ ಶೈಲಿಯ ದೋಷಗಳೇನಾದರೂ ಇದ್ದರೆ ಅವು ನನ್ನಲ್ಲಿ ಬಂದಿವೆ ಅವರ ಶೈಲಿಯ ಗುಣವೆಷ್ಟು ಬಂದಿವೆಯೋ ಓದುವವರೇ ಓದಿದ ಮೇಲೆ ಹೇಳಬೇಕು.

ಹಳೆಯ ಗುರುಗಳ ರೀತಿಯಂತೆ ಶ್ರೀ ಅರವಿಂದರ ರೀತಿಯೂ ಕೂಡ 'ಹೇಳಿದ್ದೆ ಹೇಳುವದು' ಆಗಿದೆ. ಹೊಸ ತತ್ತ್ವದ ಅಭ್ಯಾಸ ಮಾಡಿಸಿ, ಅದನ್ನು ಮನಸ್ಸಿನಲ್ಲಿ ನಾಟಿಸಲು ಈ ರೀತಿಯನ್ನು ಮತ ಪ್ರಚಾರಕರೆಲ್ಲರೂ ಅವಲಂಬಿಸಿದ್ದಾರೆ. ಆದರೂ ಶ್ರೀ ಅರವಿಂದರ ಪ್ರಚಂಡವಾದ ಪಾಂಡಿತ್ಯದ ಪ್ರಭೆಯಿಂದ, ಹಳೆಯ ಗುಡಿಗಳೊಳಗೆ ಹೊಕ್ಕವನು ದಂಗು ಬಡೆದು ಹೋಗುವಂತೆ ಎಷ್ಟೋ ಕಡೆಗೆ ಅರ್ಥ ಗ್ರಹಣವೇ ಆಗದೆ ಹೋಗುವದು. ಅದಕ್ಕಾಗಿಯೇ, ದಿಗ್ದರ್ಶಕವಾದ ವಿಚಾರ ಸೂಚನೆಯೊಂದಿಷ್ಟಿದ್ದರೆ ಬೆರಗಿನಲ್ಲಿಯೂ ಹಾದಿ ತಪ್ಪಲಿಕ್ಕಿಲ್ಲ ವೆಂದು ಈ ಗ್ರಂಥದ ತಳಹದಿಯ ಬಗೆಯನ್ನಷ್ಟು ಗೆರೆಹಾಕಿ ತೋರಿಸುವೆನು. ಶ್ರೀ ಅರವಿಂದರು ಪೌರ್ವಾತ್ಯ-ಪಾಶ್ಚಿಮಾತ್ಯ-ವಿಚಾರ-ಸಂಸ್ಕೃತಿ-ಸಾಗರಗಳೆರಡರಲ್ಲೂ ಅವಗಾಹನೆ ಮಾಡಿ ಧ್ರುವನ ದರ್ಶನವನ್ನಿ ಇದಿರಿಟ್ಟು ಸಾಗಿದ ವೀರ ಪಥಿಕರು. ಅವರ ಜೀವನವು ಮಹಾ ಜೀವನವು. ಉಳಿದ ಮಾತುಗಳಿರಲಿ - ಇಪ್ಪತ್ತಾರು ವರ್ಷಗಳವರೆಗೆ ಕ್ಷೇತ್ರ ಸಂನ್ಯಾಸಿಗಳಾಗಿ ಪಾಂಡಿಚೇರಿಯಲ್ಲಿ ಜ್ಞಾನ ಯಜ್ಞವನ್ನು ನಡೆಸಿ, ಅನೇಕ ಸಾಧಕರನ್ನು - ಸಾಗರವು ನದಿಗಳನ್ನು ಇದ್ದಲ್ಲಿಯೆ ಬರಮಾಡಿ

ಕೊಂಡಂತೆ- ಸೆಳೆದು ತಂದು ಯೋಗಿಗಳಾಗಿರುವ ಒಂದು ಮಾತೂ ಅವರ ವಿಭೂತಿಗೆ ಸಾಕ್ಷಿ ಸಾಕು. ಇಂಥವರು ಮುಗಿಲೆತ್ತರ ಕಟ್ಟಬೇಕಾದ ಕಟ್ಟಡಕ್ಕೆ ಶೇಷನ ಹೆಡೆಯ ಹತ್ತುನವರೆಗೂ ಬುನಾದಿಯನ್ನು ತೋಡುವರು. ಅಸ್ತಿ ಭಾರವನ್ನೂ ಸೋಸಿಹಾಕುವರು. ಸರ್ವತೋಮುಖವಾದ, ಸರ್ವತೋಭದ್ರವಾದ, ಸೌಂದರ್ಯಸಾರವಾದ ಕಟ್ಟಡವನ್ನು ಕಟ್ಟುವರು. ಇದರ ಅಂದ ಚೆಂದಗಳನ್ನು ತಿಳಿದುಕೊಳ್ಳ ಬೇಕಾದರೆ ಪೂರ್ವದ ಗ್ರಹಿಕೆಗಳನ್ನು ತೊರೆದು ಬರಬೇಕಾಗುವದು. ಹೊಸದನ್ನು ಗ್ರಹಿಸುವ ಹಸಿವು ಬೇಕು.

ಈ ಗ್ರಂಥದಲ್ಲಿ, ರೂಢಿಯ ಕೆಲವು ತಪ್ಪು ತಿಳುವಳಿಕೆಗಳನ್ನೂ ತಪ್ಪು ಬಹುವಾದ ನಡತೆಗಳನ್ನೂ ತೊಡೆದು ಹಾಕಿ ಹೊಸ ಅರಿವಿನ ಎಚ್ಚರಿಕೆಯನ್ನು ಕೊಟ್ಟಿದ್ದಾಗಿದೆ. ಹಳೆಯದೆಲ್ಲವೂ ಹೊನ್ನಲ್ಲ; ಅದರಲ್ಲಿ ಹೊನ್ನೂ ಮಣ್ಣೂ ಕೂಡಿದೆ. ಈ ಬೆರಿಕೆಯನ್ನು ಬೇರೆ ಬೇರೆ ಮಾಡಲು ವಿವೇಕವು ಬೇಕು. ಸನಾತನಿಗಳೆನ್ನುವವರು ಕೆಲವೊಂದು ಗ್ರಂಥಗಳ ಕಡೆಗೆ ಬೊಟ್ಟುಮಾಡಿ ಅದರಲ್ಲಿದ್ದದ್ದೆಲ್ಲವೂ ಹೊನ್ನು ಎಂದು ಹೇಳಿದರೂ ಅವರ ಜೀವನವೇಕೆ ಅದಕ್ಕೆ ಸರಿಯಾಗಿಲ್ಲವೆಂಬುದಕ್ಕಾಗಿಯಾಗಲಿ, ಜಗತ್ತಿನ ರೀತಿ ಕೆಡದಂತೆ ಅವರಿಗೆ ನೋಡಿಕೊಳ್ಳುವದೇಕಾಗುವದಿಲ್ಲವೆಂಬುವಕ್ಕಾಗಲಿ, ‘ಕಲಿಯುಗ, ಈಶ್ವರೇಚ್ಛೆ, ಅವರವರ ಪ್ರಾರಬ್ಧ, ಸಂಸಾರವೇ ಹೀಗೆ, ಪರಲೋಕದಲ್ಲಿಯೇ ನಿಜವಾದ ಸುಖವಿದೆ’ ಇವೇ ಮೊದಲಾದ ಮಾತುಗಳಲ್ಲದೆ ಬೇರೆ ಸಮಾಧಾನ ಹೇಳರು. ಶ್ರೀ ಅರವಿಂದರು ಸತ್ಯಯುಗದ ಸಾಧಕರು; ಈಶ್ವರೇಚ್ಛೆಯನ್ನೂ ಮಾನವೇಚ್ಛೆಯನ್ನೂ ಸಂಧಿಸುವ ಮಾರ್ಗ ಹುಡುಕುವ ಯೋಗಿಗಳು; ಪ್ರಾರಬ್ಧಕ್ಕೆ ಪ್ರಜ್ಞೆಯ ಫಲವು ಬಿಡಬೇಕೆಂದು ಮಾನವನ ಪೌರುಷಕ್ಕೆ ಕಸಿಮಾಡಲೆಳಿಸುವ ತೋಟಿಗರು; ಬೇರೊಂದು ದೇವಪ್ರಪಂಚವಿದೆಯೆಂದು ಸಾರುವ ಋಷಿಗಳು, ‘ಇಹೈವ ಸುಖಮಶ್ನುತೆ’ ಎಂಬ ಶ್ರುತಿವಾಕ್ಯವನ್ನು

ಸಿದ್ಧಾಂತಿಸಿಕೊಡಲು ಹವಣಿಸುವ ಸಿದ್ಧಿಸಾಧಕರು. ಆದರೂ ಹೊಸ ಪೆಲ್ಲಕ್ಕೂ ಸೌಪೆನ್ನುವವರು ಅವರಲ್ಲ. ಯಂತ್ರವು ಇಂದು ಸಾರ್ವಭೌಮ ಪಟ್ಟವನ್ನೇರಿದೆ, ಪೃಥ್ವಿಯನ್ನು ಪಾದಾಕ್ರಾಂತಮಾಡಿದೆ. ಮಾನವ ನಿರ್ಮಿತ ಯಂತ್ರದಿದಿರು ಮಾನವನೇ ಕ್ಷುದ್ರಪ್ರಾಣಿಗಳಂತೆ ತಲೆಬಾಗಬೇಕಾಗಿದೆ. ಇದು ತಪ್ಪು.

ಆತ್ಮದ ಮಹತಿಯನ್ನು ಕೇಳಿ, ಕೇವಲ ಅಂತರ್ಮುಖತೆಯೇ ಸತ್ಯವೆಂದು ವಾದವನ್ನು ನಂಬಿ ಭಾರತೀಯರು ಇಹಲೋಕದಲ್ಲಿಯೇ ಪರಲೋಕವಾಸಿಗಳಂತಾಗಿದ್ದಾರೆ. ಮಾನವನ ಮಹತ್ತ್ವವನ್ನು ವರ್ಣಿಸುತ್ತ ಕೇವಲ ಬಹಿರ್ಮುಖತೆಯೇ ಸರಿಯೆಂದು ತಿಳಿದು ಪಾಶ್ಚಿಮಾತ್ಯರು ಮಹಾಯುದ್ಧಗಳ ನೆವದಿಂದ ಮಾನವ ಸತ್ವವನ್ನೇ ಹೊಡಿದ್ದಾರೆ. ಇಬ್ಬರೂ ಒಂದೊಂದು ಕತ್ತಲೆಯಿಂದ ಕಂಗೆಡಿಸಿಕೊಂಡಿದ್ದಾರೆ. ಆತ್ಮಜ್ಞಾನದ ಸಿದ್ಧಿಯಿಂದ ಮಾನವನು ಪರಿಣತಪ್ರಜ್ಞನಾಗಿ ಇಹಲೋಕದಲ್ಲಿಯೇ ದೇವಸದೃಶನಾಗುವದು ದೈವೀಪ್ರಕೃತಿಯ ಸಂಕಲ್ಪವೇ ಆಗಿದೆ. ಇದರ ಸಿದ್ಧಿಗೂ ಸಾಧನೆಗೂ ಹೊಸದಾದ ತಕ್ಕ ದೇಹಗಳನ್ನು ಧರಿಸುವಂತೆ ವ್ಯಕ್ತಿಗಳನ್ನೂ ಸಮಾಜಗಳನ್ನೂ ಸಂಸ್ಕಾರಗೊಳಿಸುವದೇ ಭಾರತೀಯರ ನವಜನ್ಮದ ಲಕ್ಷಣ. ಒಂದಾನೊಂದು ಕಾಲಕ್ಕೆ ಹಿಂದೆ ಇದ್ದಂತೆ ಇಂದೆ ಮಾಡುವದೇ ಆದರೆ ಅದು ಪುನರಾವೃತ್ತಿ, ಪ್ರಾಪಂಚಿಕ ಪುನರ್ಜನ್ಮ ಮಾತ್ರ, ಹಳೆಬಟ್ಟೆ ಬಿಟ್ಟು ಹೊಸಬಟ್ಟೆ ಧರಿಸಿದ ಹಳೆಯ ದೇಹ ಮಾತ್ರ; ಪೌರ್ವಾತ್ಯರು ಪಾಶ್ಚಿಮಾತ್ಯರಿಂದಲೂ, ಪಾಶ್ಚಿಮಾತ್ಯರು ಪೌರ್ವಾತ್ಯರಿಂದಲೂ ಕಲಿತು ಹೊಸದೊಂದು ಜನ್ಮಪಡೆಯಬೇಕಾಗಿದೆ. ಮನುಷ್ಯ ಪ್ರಾಣಿಯೊಳಗಿನ ಮಂಗತನವು ಸತ್ತು, ನರನೊಳಗೆ ನಾರಾಯಣ ಉದಯವಾಗಬೇಕಾಗಿದೆ. ಹೀಗೆ ಅಣಿಯಾಗುವಂತೆ ಸಂಸ್ಕೃತಿಯನ್ನು ಹದಕ್ಕೆ ತರುವದೇ ನವಜನ್ಮದ ಮುಂಗುರುಹು. ಇದಕ್ಕೆ ಆವಶ್ಯವಾದಷ್ಟೆ ಹಳೆಯ ಮಾತುಗಳನ್ನು ಸ್ವೀಕರಿಸಬಹುದು,

ಹೊಸಮಾತುಗಳನ್ನೂ ಸ್ವೀಕರಿಸಬಹುದು. ಇದೇ ಸೂತ್ರವನ್ನು ಹಿಡಿದು ಅರ್ವಾಚೀನ ಭಾರತೀಯ ಇತಿಹಾಸದ ಮೀಮಾಂಸೆಯು ಇಲ್ಲಿ ಮಾಡಲಾಗಿದೆ.

ನನ್ನ ಗೆಳೆಯರಾದ ಚೆನ್ನಮಲ್ಲಪ್ಪ ಗಲಗಲಿ, ಹಲಸಂಗಿ (ಮಧುರಚೆನ್ನ) ಇವರು ಈ ಕೆಲಸವನ್ನು ನನಗೆ ಒಪ್ಪಿಸಿರದಿದ್ದರೆ ಗುರು ಅರವಿಂದರ ಈ ಸಹಜ ಸೇವೆಯು ಘಟಿಸುತ್ತಿರಲಿಲ್ಲ. ಬಹಳೇ ತಾಳ್ಮೆಯಿಂದಲೂ ಪ್ರಯತ್ನದಿಂದಲೂ ಈ ಕಾರ್ಯವನ್ನು ನನ್ನಿಂದ ಮಾಡಿಸಿದ್ದಕ್ಕಾಗಿ ನಾನು ಅವರಿಗೆ ಋಣಿಯಾಗಿದ್ದೇನೆ.

ಸಾಧನಕೇರಿ<br>೧೦—೧೦—೩೬ } ದ. ರಾ. ಬೇಂದ್ರೆ.



# ಭಾರತೀಯ ನವಜನ್ಮ



**Life is Yoga**

## SRI AUROBINDO'S WORKS. (English)

| | | | |
|---|---|---|---|
| 1 | Essays on Gita *(1st part)* .... | Rs. | 5- 0-0 |
| 2 | Do *(2nd part)* .... | ,, | 7- 0-0 |
| 3 | The Mother. .... .... .... | ,, | 1- 0-0 |
| 4 | Yoga & its objects. .... .... | ,, | 0-12-0 |
| 5 | Isha Upanished. .... .... | ,, | 1- 8-0 |
| 6 | Thoughts & Glimpses. .... | ,, | 0- 8-0 |
| 7 | Renaissance in India. .... .... | ,, | 1-12-0 |
| 8 | The Ideal of the Karmayogin. | ,, | 1-12-0 |
| 9 | Ideal & Progress. .... .... | ,, | 1- 0-0 |
| 10 | The Brain of India. .... .... | ,, | 0- 6-0 |
| 11 | Utterpara Speech. .... .... | ,, | 0- 4-0 |
| 12 | The Teaching & the Ashram .... | ,, | 0-10-0 |
| 13 | War & Self Determination. .... | ,, | 2- 0-0 |
| 14 | Songs to Myrtilla. .... .... | ,, | 1- 4-0 |
| 15 | Baji Prabhou. .... .... | ,, | 0-10-0 |
| 16 | National Value of Art. .... | ,, | 0- 8-0 |
| 17 | The Superman. .... .... | ,, | 0- 6-0 |
| 18 | The Riddle of this World. .... | ,, | 2- 0-0 |
| 19 | National Education. .... .... | ,, | 1- 0-0 |
| 20 | Kalidasa. .... .... .... | ,, | 1- 0-0 |
| 21 | Six Poems. .... .... .... | ,, | 1- 4-0 |
| 22 | Evolution. .... .... .... | ,, | 0- 8-0 |
| 23 | Rishi Bankim Chandra. .... | ,, | 0- 6-0 |
| 24 | Lights on Yoga. .... .... | ,, | 1- 4-0 |
| 25 | Bases of Yoga. .... .... .... | ,, | 3- 0-0 |

Sri Aurobindo's books in Hindi, Tamil, Telagu and Gujarathi also stocked and supplied.

BHARATHA SHAKTHY NILAYAM
BOOK SELLERS & PUBLISHERS,
ASHRAM SQUARE ( Book Stall )
PONDICHERRY, ( F. INDIA.)

# ಭಾರತೀಯ ನವಜನ್ಮ

## ಒಂದನೇಯ ಪ್ರಕರಣ

### ಭಾರತೀಯ ನವಜನ್ಮದ ಮಹತ್ವ

ಭಾರತೀಯ ನವಜನ್ಮ—ನವಜನ್ಮ ಎಂದು ಇತ್ತೀಚೆ ಅಲ್ಲಲ್ಲಿ ಮಾತು ಕೇಳಬರುತ್ತಿದೆ. ಅದೇ ಹೆಸರಿನಿಂದ ಮತ್ತು ಅದೇ ವಿಷಯ ವನ್ನು ಕುರಿತು ಮಿ. ಜೇಮ್ಸ್ ಎಚ್. ಕಝಿನ್ಸ್ ಎಂಬ ಕವಿಗಳೂ ಮತ್ತು ಸೂಕ್ಷ್ಮ ವಿಮರ್ಶಕರೂ ಆದ ವಿಚಾರಿಗಳೊಬ್ಬರು ಕೆಲವು ಜ್ಞಾನ ಪ್ರಭಾಪೂರ್ಣವಾದ ಪ್ರಬಂಧಗಳನ್ನು ಬರೆದಿದ್ದಾರೆ. ಹೊಸಜೀವನ ಹಾಗು ಹೊಸ ವಿಚಾರಗಳ ಉತ್ತರೋತ್ತರವನ್ನು ಬಣ್ಣಿಸುವ ಇದೇ ವಿಚಾರಾಂದೋಲನದ ವಿವಿಧ ಮುಖಗಳನ್ನು ಕುರಿತು ಸೂಚಕವಾಗಿ ಬೇರೆ ಕೆಲವು ಲೇಖನಗಳನ್ನು ಬರೆದಿದ್ದಾರೆ. ಈ ಆಂದೋಲನವನ್ನು ನವಜನ್ಮ ಎಂದು ಬಣ್ಣಿಸುವದು ಯಥಾರ್ಥವೇ ಸರಿ. ಈ ನವಜನ್ಮವು ಹಿಂದುಸ್ಥಾನದ ಹೊಸ ಹುಟ್ಟು ನಿಜವಾಗಿಯೇ ಇದ್ದುದಾದರೆ—ಭಾರ-ತಕ್ಕೂ ಜಗತ್ತಿಗೂ ಒಳ್ಳೆ ಮಹತ್ತ್ವವಿದ್ದಾಗಲೇಬೇಕು. ಭಾರತ ಧರ್ಮದ ಧ್ಯೇಯಗಳನ್ನು ಅದರ ಪುರಾತನ ಶಕ್ತಿಯನ್ನು ಮರಳಿ ಸಂಪಾದಿಸುವ ದಾಗಲಿ, ಅವುಗಳನ್ನೆ ಬದಲಿಸುವದಾಗಲಿ ಈ ಆಂದೋಲನವನ್ನವಲಂಬಿಸಿರುವದರಿಂದ ಭಾರತಕ್ಕೆ ಇದರ ಮಹತ್ತ್ವ ಹೆಚ್ಚು. ಇದರ ಮಹತ್ತ್ವವು ಜಗತ್ತಿಗಿರುವ ಕಾರಣವೇನೆಂದರೆ— ಭಾರತಶಕ್ತಿಯು ಹಲವು ಬಗೆಯಲ್ಲಿ ಅಪೂರ್ವವಾದದ್ದು; ಅದರ ವ್ಯಕ್ತಿಧರ್ಮವು ಇದುವರೆಗೂ ಮಾನವಜಾತಿ-ಯನ್ನು ರೂಪಿಸುತ್ತಿರುವ, ಆಳುತ್ತಿರುವ ಸತ್ತ್ವಕ್ಕಿಂತಲೂ ತೀರ ಬಿನ್ನವಾಗಿದ್ದರೂ ಬರುವ ಕಾಲದಲ್ಲಿ ಪ್ರಭುತ್ವವನ್ನು ಪಡೆಯಬಲ್ಲ ಸತ್ತ್ವಕ್ಕೆ

ಸಮೀಪವಾಗಿದೆ. ಸದ್ಯಕ್ಕೆ ನಾನು ಆ ವಿಚಾರದ ಪ್ರಥಮ ಭಾಗವನ್ನಷ್ಟೆ ಮುಂದಿಡಲಿರುವೆನು. ಭಾರತದ ನವಜನ್ಮದಿಂದ ಮಾನವ ವಂಶಕ್ಕೆ ಯಾವ ಹಿತವಾದೀತು ಎಂಬ ವಿಶಾಲತರ ಪ್ರಶ್ನೆಗಿಂತ ಮುಂಚಿತವಾಗಿ ಭಾರತಕ್ಕೆಯೇ ಅದರಿಂದಾಗಬಹುದಾದ ಲಭ್ಯಾಂಶವೇನು ಎಂಬುದನ್ನು ವಿಚಾರಿಸಬೇಕಾಗುವದು. ಅದಲ್ಲದೆ, ಪ್ರಸ್ತುತದಲ್ಲಿಯೇ ಈ ಮಾತೇ ಅತಿ ಮಹತ್ತ್ವದ ವಿಷಯವಾಗುವ ಸಂಭವವೂ ಇದೆ.

## ನವಜನ್ಮವೆಂದರೇನು ?

ಭಾರತದಲ್ಲಿ ನವಜನ್ಮವಾಗಲಿದೆಯೇ ಎಂಬುದೇ ಮೊಟ್ಟಮೊದಲಿನ ಪ್ರಶ್ನೆ. ಇದರ ಉತ್ತರವು 'ನವಜನ್ಮ' ರಿನೇಸಾನ್ಸ ಎಂದರೇನು ಎಂಬ ಅರ್ಥವನ್ನವಲಂಬಿಸಿದೆ. ಇಷ್ಟಲ್ಲದೆ, ಭವಿಷ್ಯತ್ ಕಾಲದಲ್ಲಿ ಏನೇನಾಗುವದೋ ಬಿಡುವದೋ ಯಾರು ಬಲ್ಲರು? ಇನ್ನೂ ಈ ನವಜನ್ಮವು ಹೊಟ್ಟೆಬಿಟ್ಟು ಹೊರಬೀಳುವದರಲ್ಲಿರುವಾಗ ಭಾವ್ಯದ ಜಾತಕವನ್ನಿಲ್ಲಿ ಬರೆಯಲಾದೀತೇ ? 'ರಿನೇಸಾನ್ಸ' ಎಂದೊಡನೆ— ಐರೋಪ್ಯರ ಸಂಸ್ಕೃತಿಕ ಪರಿವರ್ತನ ಉಂಟಾದ ಕಾಲದ ನೆನಪಾಗಿ ಅದಕ್ಕೆ ಈ ನಾಮಕರಣವಾಗಿತ್ತೆಂದು ಕಂಡುಬರುವದು. ಅಲ್ಲಿ ಅದಷ್ಟು ಹೊಸ ಎಚ್ಚರವಲ್ಲ— ಒಂದರ ಪದಚ್ಯುತಿಯಾಗಿ, ಮೊದಲಿನದಕ್ಕೆ ಪರಾವರ್ತನವಾಯಿತು; ಪುರಾತನ 'ಗ್ರೀಕೋ-ರೋಮಕ' ಶಕ್ತಿಯು, ಕ್ರೈಸ್ತ ದೀಕ್ಷೆಯನ್ನು, ಟ್ಯೂಟನ್ನರ ಮುಪ್ಪಿಯನ್ನು, ಪಾಳೆಗಾರಿಕೆ ಪರಿಪಾಟಿಯನ್ನೂ ಪಡೆದ ಇರೋಪಖಂಡವನ್ನು ತನ್ನ ಅಂಶಾವತಾರದಿಂದ ಗೆದ್ದು ಜಂಜಡವಾದ ಮಹತ್ತ್ವದ ಪರಿಣಾಮರೂಪಗಳನ್ನುಂಟುಮಾಡಿದ್ದೇ ಆಗಿನ ಕಾರ್ಯ. ಈ ಲಕ್ಷಣದ ರಿನೆಸಾನ್ಸವು ಭಾರತದಲ್ಲಿ ಖಂಡಿತವಾಗಿ ಸಾಧ್ಯವಲ್ಲ. ಆಯರ್‌ಲ್ಯಾಂಡಿನಲ್ಲಿ ಮೊನ್ನೆ ಮೊನ್ನೆ ಆದ ಕೆಲ್ಟಿಕ ಚಳವಳಿಗೆ ಇಲ್ಲಿಯ ಚಳವಳಿಯು ಹೋಲುಮೆಯಿದೆ. ಈ ಚಳವಳಿಯಲ್ಲಿ ಸ್ವಾತಂತ್ರ್ಯ ದರ್ಶನದ ಪ್ರೇರಣೆಯಿಂದ ಪಾರಮಾರ್ಥಿಕ ಶಕ್ತಿಯು ನವರೂಪ

ನವರಚನೆಗಳನ್ನು ಸೃಷ್ಟಿಸುವದು. ಆಯರ್ಲ್ಯಾಂಡಿನಲ್ಲಿ ಸೆಲ್ಟಿಕ ವೃತ್ತಿಗೆ ಪುನರಾಗಮನವಾಯಿತು— ಮಧ್ಯೆ ಆಂಗ್ಲಪ್ರಭಾವ ಗ್ರಹಣವು ಅಲ್ಲಿಯ ಸಂಸ್ಕೃತಿಯನ್ನೂ ಮುಸುಕಿತ್ತು. ಇ.ಸ. ೧೯೦೫ ರಿಂದ ಇತ್ತೀಚಿಗಾದ ರಾಜಕೀಯ ಉದ್ರೇಕದಲ್ಲಿ ಇದೇ ಬಗೆಯ ವೃತ್ತಿಯ ಒಂದು ನಿರ್ಧಾರಿತ ರೂಪವು ಕಂಡುಬರುವದು. ಆದರೆ ಇದೂ ಕೂಡ ಒಂದು ಉಪಮಾನ ಮಾತ್ರ; ಈ ಹೋಲಿಕೆಯಿಂದಲೂ ಭಾರತದ ಸಂಪೂರ್ಣ ನಿಜವು ಪ್ರಕಟವಾಗಲಾರದು.

## ಹಿಂದುಸ್ಥಾನದಲ್ಲಿ ನವಜನ್ಮದ ಸ್ವರೂಪ

ಹಿಂದುಸ್ಥಾನದಲ್ಲಿ ಸದ್ಯಕ್ಕಿರುವದು ಪರಸ್ಪರ ವಿರುದ್ಧ ಪ್ರಭಾವಗಳ ಒಂದು ರೂಪಗೆಟ್ಟ ಮಹಾಪ್ರಳಯ; ಹೊಸ ಸ್ವಯಂ ಪ್ರಜ್ಞೆ ಮೇಲೆ ಮೂಡಿ ಬಂದು ಅಲ್ಲಲ್ಲಿ ಮಾತ್ರ ಚಿಕ್ಕೆಗಳಂತೆ ಮಿಂಚು ಮಿಣುಕು ಕಾಣುವದು. ಆದರೆ ಇದು ಜನ ಮನವನ್ನು ತನ್ನ ಹಿಡಿತದಲ್ಲಿ ಒತ್ತಿ ಹಿಡಿದಿಲ್ಲ; ಕೇವಲ ಮುಂದಿನವರ ಲಕ್ಷಣವಾಗಿ ಇದು ಉಳಿದಿದೆ; ಮುಂಚೂಣಿಯ 'ಮಷಾಲು' ಗಳಿದ್ದಂತೆ, ಪ್ರಥಮ ಪಥಿಕರ ಜಡ-ಘೋಷವಿದ್ದಂತೆ. ಒಟ್ಟಾರೆ ನೋಡಿದರೆ, ಭಾರತದ ಜಾಗೃತಿಯು— ನೂತನ ಜಗತ್ತಿನಲ್ಲಿಯೂ ಪರಕೀಯ ಪರಿಸ್ಥಿತಿಯಲ್ಲಿಯೂ ಕಣ್ತೆರೆದ ಒಂದು ಅದ್ಭುತ ಶಕ್ತಿಯು ಅಂಗಾಂಗಗಳಲ್ಲಿಯೂ ತನ್ನ ಪ್ರಾರಬ್ಧ ಕರ್ಮ ಬಂಧನಗಳಿಂದಲೂ ಪರಕೀಯರ ಪಾಶಗಳಿಂದಲೂ ಕಿರಿದಾಗಿ ಹಿರಿದಾಗಿ ಶೃಂಖಲಾಬದ್ಧವಾಗಿರುವದನ್ನು ಕಂಡು ಅದರೊಳಗಿಂದ ಒದ್ದಾಡಿ ಬಿಡಿಸಿ ಕೊಂಡು ತನ್ನ ಉದ್ಘೋಷಣೆಯಿಂದ ಜಗತ್ತಿಗೆ ತನ್ನ ಮುದ್ರೆಯೊತ್ತ ಬೇಕೆಂದು ಎತ್ತಿಬರುವ ಸನ್ನಾಹದ ಚಿತ್ರವು. ತೋರುವದು. ಮಗ್ಗಲು ಮಗ್ಗಲಿಗೂ ಬಂಧಗಳು ಸವೆದು, ಹರಿದು, ಮುರಿದು ಚಟ ಚಟನೆ ಬಿಚ್ಚುವ ಧ್ವನಿಯು ಕೇಳಿಸಬಂದರೂ ಚಲನವಲನದ ಸ್ವಾತಂತ್ರ್ಯವಿನ್ನೂ ಬಂದಿಲ್ಲ. ಕಣ್ಣೆವೆಗಳು ಬಿಚ್ಚಿಲ್ಲ; ಜೀವಕಮಲದ ಪಕಳೆಗಳು ಈಷದು-ನ್ಮೀಲಿತವಾಗಿದ್ದರೂ ಕುಲಕುಂಡಲಿನಿಯು ಇನ್ನೂ ತನ್ನ ಹೆಡೆಯನ್ನೆತ್ತಿಲ್ಲ.

## ನವಜನ್ಮವೆಂಬ ಮಾತು ಭಾರತಕ್ಕೆ ಸರಿ ಹೋಗಬಹುದೇ ?

ಹಿಂದುಸ್ಥಾನವು ಯಾವಾಗಲೂ ಎಚ್ಚರಗೊಂಡೇ ಇರುವದರಿಂದೂ ಇಲ್ಲಿ ಹೊಸ ಎಚ್ಚರದ ಅವಶ್ಯಕತೆಯು ಇಲ್ಲವೆಂದೂ 'ರಿನೇಸಾನ್ಸ'-'ನವಜನ್ಮ'ವೆಂಬಮಾತು ಭಾರತಕ್ಕೆ ಸರಿಹೋಗಬಹುದೆ ಎಂದೂ ಜೆ. ಕಝಿನ್ಸರವರು ತಮ್ಮ ಗ್ರಂಥದಲ್ಲಿ ಪ್ರಶ್ನಿಸಿದ್ದಾರೆ. ಈ ಮಾತಿನಲ್ಲಿ ಸತ್ಯಾಂಶವಿಲ್ಲದೆ ಇಲ್ಲ; ಹೊರಗಿನ ದೇಶದಿಂದ ಪೂರ್ವಗ್ರಹದೂಷಿತ ವಾಗದ ಮೀಸಲು ಮನಸ್ಸಿನಿಂದ ಬಂದವರಿಗೆ ಹಿಂದುಸ್ಥಾನದೊಳಗಿನ ಭೂತ ವರ್ತಮಾನಗಳೊಳಗಿನ ಪ್ರವೃತ್ತಿಯು ಅಖಂಡ ಪ್ರವಾಹವು ಕಣ್ಣಿಗೆ ಬಿದ್ದು ಅದೇ ಎದ್ದು ತೋರಿಬರುವದು ಸಹಜವಾಗಿದೆ. ಆದರೆ ಭಾರತೀಯ ಮಕ್ಕಳಾದ ನಾವು ಪ್ರಾಚೀನ ಕರ್ಮದೆಲ್ಲ ಫಲಕ್ಕೆ ಒಂದು ಅವರ ಕಟ್ಟುಪರಿಣಾಮಗಳನ್ನನುಭವಿಸಿ ನರಳುತ್ತಿರುವಾಗ ಈ ಮಾತು ಪೂರ್ಣವಾಗಿ ಒಪ್ಪಿಗೆಯಾಗಲಾರದು. ಕ್ರಿಸ್ತಾಬ್ದದ ಹದಿನೆಂಟು ಹತ್ತೊಂಬತ್ತನೆಯ ಶತಮಾನಗಳು ಭಾರತದ ಕರ್ಮವಿಪಾಕದ ಹೊತ್ತು. ಈ ಹೊತ್ತಿನಲ್ಲಿ ಒಂದು ಸಣ್ಣ ಕುಮುಹೂರ್ತದ ಮಟ್ಟಿಗಾದರೂ ಖಂಡಿತವಾಗಿಯೂ ವೈಶ್ವಾನರನು ನಂದಿಯೇ ಹೋದನೇನೋ ಎನ್ನುವ ಕೇಡುಗಾಲವು ಬಂದಿತ್ತು. ಆಗ್ಗೆ ದೇಶದ ದೇಹವು ಹೋಳು ಹೋಳಾಗಿ ಪೃಥಕ್ಕೃತವಾಗುವದು ಪ್ರಾರಂಭವಾಗಿ ರಾಜಕೀಯ ಅರಾಜಕತೆಯಲ್ಲಿ ಅದು ಮುಳುಗಿ ಯುರೋಪಿನ ಸಾಹಸಿಗರಿಗೆ ಇಲ್ಲಿ ಕಾಲಿಡಲು ನೆವಮಾಡಿಕೊಟ್ಟಿತು. ಒಳಗೊಳಗೆ ಧರ್ಮ ಹಾಗು ಕಲೆಗಳ ಪ್ರತಿಭೆಗೆ ಸಂಚಕಾರ ಬಂದಿದ್ದಿತು; ಶಾಸ್ತ್ರ, ತತ್ವ, ಬುದ್ಧಿಗಳ ಪ್ರಾಣಗುಂದಿ, ಕಲ್ಲಾಗಿ,—ಹೊಸ ಮನ್ವಂತರದ ಪ್ರಾರಂಭದಲ್ಲಿ ಹಳೆಯದೊಂದರ ಲಯವಾಗುವದೆಂದು ನಮ್ಮ ಪುರಾಣೇತಿಹಾಸಗಳಲ್ಲಿ ಹೇಳಿರುವಂತೆ,--ಇಲ್ಲಿಯ ಅವಸರ್ಪಿಣಿ ಕಾಲದ ಅಧೋಬಿಂದುವಿಗೆ ಸ್ಥಿತಿ ಬಂದು ಮುಟ್ಟಿದ್ದಿತು-ಕೇವಲ ಶುಷ್ಕ ಪಾಂಡಿತ್ಯವು ಹರಡಿಕೊಂಡಿತ್ತು. ಇಂಥ ನಿಶ್ಚೇಷ್ಟ ಕಾಲದಲ್ಲಿ ಐರೋಪ್ಯ ಸಂಸ್ಕೃತಿಯ ಭಾರದಡಿಯು ಒತ್ತಾಟವು

ಉಂಟಾಗಲು ಹೊಸ ಎಚ್ಚರವುಂಟಾಗಿ ಮತ್ತೆ ತಲೆಯೆತ್ತುವದು ಅವಶ್ಯವಾಯಿತು.

## ನವಜನ್ಮದ ಲಕ್ಷಣ

ಮುಖ್ಯವಾಗಿ ನಾವು ಮೂರು ಸಂಗತಿಗಳನ್ನು ಗಮನಿಸಬೇಕಾಗುವದು (೧) ಭಾರತೀಯ ಪ್ರಾಚೀನ ಮಹಾಚಾರಿತ್ರ್ಯ ಹಾಗು ಸಂಸ್ಕೃತಿಗಳೂ ಮತ್ತು ತನ್ನ ಸ್ಥೈರ್ಯವಿಲ್ಲದೆ ಅದು ಬಿದ್ದುಕೊಂಡ ಮಂದಕಾಲ; (೧) ಪಾಶ್ಚಾತ್ಯರ ಪ್ರಥಮ ಸಂಪರ್ಕದೊಡನೆಯೇ ಅವೆಲ್ಲಿ ತುಣುಕು ತುಣುಕಾಗಿ ಕಳತು ಕೊಳತು ವಿನಾಶವಾಗುವವೋ ಎಂದು ಭಯವುಂಟುಮಾಡಿದ ಸಂದುಕಟ್ಟಿನಕಾಲ, (೩) ಹತ್ತೊಂಬತ್ತು ವರ್ಷಗಳ ಪೂರ್ವದಲ್ಲಿ ಒಂದು ವಿಧದ ರೀತಿಯಾಸ್ವಸ್ಥತೆಯಿಂದ ಪ್ರಕಟಿತವಾದ ಅದರ ಏರಿಕೆಯ ಗತಿಮಾಸ. ರಾಷ್ಟ್ರದ ತ್ರಾಣಗುಂದಿದರೂ ಅದರ ಇಳಿತದ ಕಾಲದಲ್ಲಿಯೂ ಪಾರಮಾರ್ಥಿಕ ಪ್ರತಿಷ್ಠೆ ಉಳಿದ ಮಾತನ್ನಷ್ಟೆ ವಿ. ಕಣ್ಣಿನ್ನರವರು ನಿಷ್ಟೆಸಿನೋಡುವರು. ಭಾರತದ ಭಾಗ್ಯಕ್ಕೆ ಬಂದ ಗಂಡಾಂತರದ ಕಾಲದಲ್ಲಿ ಅದರಿಂದಲೇ ಭಾರತದ ಪ್ರಾಣ ಉಳಿಯಿತೆಂಬುದೂ ನವಜನ್ಮದ ಪ್ರಾರಂಭ ಬಿಂದುವಾದರೂ ಅದೇ ಎಂಬುದೂ ನಿಜವೇ ಸರಿ. ಇಂಥ ಭಾರದ ಕೆಳಗೆ ಇನ್ನೊಂದು ರಾಷ್ಟ್ರವು ಸಿಕ್ಕಿದ್ದರೆ ಅದರ ದೇಹ ಆತ್ಮಗಳೆರಡೂ ನುಗ್ಗು ನುರಿಯಾಗಿ ಹೋಗಬಹುದಾಗಿತ್ತು. ಹಿಂದುಸ್ಥಾನದಲ್ಲಿಯಾದರೂ ಇದರ ಹೊರಮೆಯ್ಯ ಪ್ರತಿ ಅವಯವಗಳೂ ಹುಳತು ಹುಣ್ಣಾಗಿದ್ದವು, ಚೇತರಿಸಿಗೊಂಡು ಏಳುವ ಶಕ್ತಿಗಿಂತ ಮಲತು ಮಲಗುವ ಮಾಂದ್ಯವೇ ಹೆಚ್ಚಾಗಿದ್ದಿತು; ಮತ್ತು ಮಲತಿತೆಂದರೆ ಮರಣವು ಬರುವದು ನಿಶ್ಚಯ. ಹೇಗಾದರೂ ಈಗ ಮಾತ್ರ ಹಿಂದುಸ್ಥಾನವು ಎಚ್ಚರಗೊಂಡು ಅದರ ಮುಕ್ತಿಕಾಲವು ಬಂದಿದೆ. ಅದರ ದೇಹದಲ್ಲಿ ಎಷ್ಟೇ ಬದಲಾವಣೆಗಳಾದರೂ ಅದು ತನ್ನ ವಿಲಕ್ಷಣವಾದ ಸ್ವತ್ವದ ಸತ್ತ್ವವನ್ನು ಕಳೆದುಕೊಳ್ಳಲಾರದು. ನವದೇಹವನ್ನು ಧಾರಣ ಮಾಡುವಾಗ ಅದಕ್ಕೆ

ಸರಿಯಾಗಿ ತತ್ತ್ವ, ಕಲೆ, ಸಾಹಿತ್ಯ, ವಿದ್ಯಾಸಂಸ್ಕಾರ, ರಾಜಕಾರಣ, ಸಮಾಜ ಪದ್ಧತಿಗಳಲ್ಲಿಯೂ ಹೊಸತನವು ಬರಲೇಬೇಕು. ಇವೇ ಈ ನವ ಜನ್ಮದ ಲಕ್ಷಣವು. ಆದರೂ ಈ ಹೊಸ ಪದ್ಧತಿಗಳು ಹಳೆಯ ತತ್ತ್ವ-ಗಳಿಗೆ ವಿರುದ್ಧವಾಗಿರದೆ ಹಳೆಯವನ್ನೇ ದೋಷರಹಿತವಾಗಿ ಪರಿಪೂರ್ಣಗೊಳಿಸಿ ಹೊಸದಾಗಿ ಹೇಳಿದಂತಿರುವವು.

## ಭಾರತದ ಜಾಗೃತಿಯು ಹಿಂಸ್ರ ಪಶುಜಾತಿಗೆ ಸೇರತಕ್ಕದ್ದಲ್ಲ

ಹಾಗಾದರೆ, ಈ ಭಾರತದ ಪುರಾತನ ಶಕ್ತಿಯು, ವಿಲಕ್ಷಣವಾದ ಆತ್ಮವು, ಇದ್ದಿತಾದರೂ ಏನು? ಐರೋಪ್ಯ ಲೇಖಕರು ಇಲ್ಲಿಯವರ ವೇದಾಂತಿಕ ವೃತ್ತಿ, ಸಹಜವಾದ ಧಾರ್ಮಿಕ ಬುದ್ಧಿ, ಮತಶ್ರದ್ಧಾತಿ-ಶಯ, ಪರಲೋಕ ಪ್ರಣಯ, ಗಳನ್ನು ಕಂಡು ಇದಿಷ್ಟೇ ಭಾರತದ ಸತ್ತ್ವ ಸಾರವೆಂದು ತಿಳಿದಿದ್ದರು. ಅನಂತ್ಯದ ಚಿಂತನದಿಂದ ಆಕ್ರಾಂತವಾದ ನಿರ್ಗುಣ ವೇದಾಂತಿಕ ಹಾಗು ಧಾರ್ಮಿಕ ಚಿತ್ತವು ಪ್ರಪಂಚದಿಂದಲೂ ವ್ಯವಹಾರದಿಂದಲೂ ' ಮಾಯೆ ' ಯೆಂದು ನಿವೃತ್ತವಾಗಲು ಕನಸುಗಾರಿಯೂ, ಅವ್ಯವಹಾರ್ಯವೂ, ಜೀವನಕ್ಕೆ ಅನರ್ಹವೂ ಆಗಿರುವದೇ ಹಿಂದುಸ್ಥಾನದ ಲಕ್ಷಣವೆಂದು ಅವರು ಹೇಳಿದರು; ಉಳಿದ ಮಾತು-ಗಳಂತೆ ಈ ಮಾತಿನಲ್ಲಾದರೂ ಭಾರತೀಯರು, ಕೆಲಕಾಲದ ವರೆಗೆ, ತಮ್ಮ ಪಾಶ್ಚಾತ್ಯ ಆಚಾರ್ಯರ ಹಾಗು ಯಜಮಾನರ ಪ್ರತಿಧ್ವನಿಗಳಾಗಿ ವರ್ತಿಸಿದರು. ತಮ್ಮ ವೇದಾಂತ, ತಮ್ಮ ಸಾಹಿತ್ಯ, ತಮ್ಮ ಧರ್ಮಗಳ ಬಗ್ಗೆ ಸ್ವಲ್ಪ ಜಂಬದಿಂದ ಮಾತನಾಡಲು ಕಲಿತರೂ ಉಳಿ-ದೆಲ್ಲ ವ್ಯವಹಾರದಲ್ಲಿ ಪಾಶ್ಚಿಮಾತ್ಯರ ಶಿಷ್ಯರಾಗಿಯೂ ಅನುಕರಣಕಾರರಾಗಿಯೂ ನಡೆದುಕೊಂಡರು. ಆದಾದ ಮೇಲೆ ಇತ್ತೀಚಿಗೆ ಇರೋ-ಪಿನವರು ವಿಲಕ್ಷಣ ಶಕ್ತಿ ಸೌಂದರ್ಯಗಳಿಂದೊಡಗೂಡಿದ ಭಾರತದ ಚಿತ್ರಕಲೆಯೊಂದು ಇದ್ದಿತೆಂದು ಕಂಡು ಕೊಂಡರು. ಆದರೆ ಇಷ್ಟರಲ್ಲಿ ಭಾರತೀಯ ಚಿತ್ತವೂ ಸ್ವೋದ್ಧಾರ ಕರ್ಮದಲ್ಲಿ ತೊಡಗಿ ಆತ್ಮ

ನಿರೀಕ್ಷಣೆಯಲ್ಲಿ ತನ್ನನ್ನು ತಾನು ಸ್ಪಷ್ಟತೆಯಿಂದ ನೋಡಲಾರಂಭಿಸಿ ತನ್ನ ಬಗ್ಗೆ ತೀರ ತಪ್ಪು ತಿಳುವಳಿಕೆ ತನಗೆ ಮಾಡಿಕೊಡಲಾಗಿತ್ತೆಂದು ಕಂಡು ಹಿಡಿದಿದ್ದಿತು. ಯಾವಾಗಲೂ ಏಕಾಂಗ ಮಾತ್ರವಾದ ಗುಣಗ್ರಹಣ ಪದ್ಧತಿಯು ಬಹುತರವಾಗಿ, ತಪ್ಪದೆ ಸುಳ್ಳಾಗಿ ಪರಿಣಮಿಸುವದು. ತತ್ತ್ವಜ್ಞಾನ ಸಂಗೀತಗಳಲ್ಲಿ ಮೇಲ್ಮೆಪಡೆದ ಜರ್ಮನಿಯು ತನ್ನ ಸಾಮಗ್ರಿಯ ಪರಮೋಪಯೋಗವನ್ನು ಮಾಡಿಕೊಳ್ಳಲು ಅಸಮರ್ಥ ವಾಗಿದ್ದರಿಂದ, ಅವ್ಯವಹಾರ್ಯರ ಸ್ವಪ್ನಾಳುಗಳ, ಕಲ್ಪನಾಮಗ್ನರ, ಪಾಂಡಿತ್ಯವುಳ್ಳವರ ಭಾವನಾಪರರಾದವರ ದೇಶವೆಂದೂ ಅದೆಷ್ಟೋ ಸ್ಥೈರ್ಯ, ವಿಧೇಯತೆ, ಉದ್ಯೋಗ ಪ್ರೀತಿಯಿಂದೊಡಗೂಡಿದ್ದರೂ ರಾಜ ಕೀಯ ರೀತಿಯಲ್ಲಿ ಅಪಾತ್ರವೂ 'ಪ್ರಶಂಸನೀಯವಾದರೂ ಪರಿ- ಹಾಸಕ್ಕೀಡಾದ ಜರ್ಮನಿ' ಎಂದೆನಿಸಿಕೊಳ್ಳಬೇಕಾಗಲಿಲ್ಲವೇ? ಇರೋಪ ಖಂಡವು ಆ ಭ್ರಮೆಯಿಂದ ಭಯಗ್ರಸ್ತವಾಗಿ ಎಚ್ಚರಗೊಂಡಿದೆ. ಭಾರತ ದೊಳಗಿನ ನವಜನ್ಮವು ಸಂಪೂರ್ಣವಾದಾಗ್ಗೆ ಭಾರತ ಶಕ್ತಿಯ ನಿಜ ಸ್ವಭಾವ ಕೃತಿ ಸಾಮರ್ಥ್ಯಗಳನ್ನು ಕಂಡು ಜಗತ್ತು ದಿಗಿಲುಗೊಳ್ಳು ವದರಲ್ಲಿ ಸಂದೇಹವಿಲ್ಲ; ಅದರಂತೆಯೇ ಇಲ್ಲಿಯ ಜಾಗೃತಿಯು ಹಿಂಸ್ರ ಪಶುಜಾತಿಗೆ ಸೇರತಕ್ಕದ್ದಲ್ಲವೆಂಬುವದರಲ್ಲಿಯೂ ಸಂಶಯವಿಲ್ಲ.

**ಭಾರತೀಯ ಚಿತ್ತದ ರಾಜರಹಸ್ಯ**

ಪಾರಮಾರ್ಥಿಕತೆಯು ಭಾರತೀಯ ಚಿತ್ತದ ರಾಜರಹಸ್ಯವಾಗಿದೆ; ಅನಂತದ ಅರಿವು ಅದರ ಹುಟ್ಟುಗುಣವಾಗಿದೆ. ಬಹಿರ್ವ್ಯಾಪಾರಗಳ **ಕೇವಲ ಶಕ್ತಿ, ಕೇವಲ** ಜ್ಞಾನಗಳಿಂದ ಜೀವನದರಿಕೆಯಾಗಲಾರ ದೆಂಬುದು ಘಟಪಟನ್ಯಾಯದ ವಾದವಿವಾದದ ಕಾಲದಲ್ಲಿಯೂ ಅಜ್ಞಾನ ವೃದ್ಧಿಯಾಗುತ್ತ ಹೋದ ಇಳಿಗಾಲದಲ್ಲಿ ಭಾರತಕ್ಕೆ ಮೊದಲಿಂದಲೂ ಗೊತ್ತಿತ್ತು. ಅದರ ಅಂತರ್ದೃಷ್ಟಿಯು ಎಂದೂ ಕುರುಡಾಗಿ ಕಳೆದು ಹೋಗಲಿಲ್ಲ. ಭೌತಿಕ ಧರ್ಮಗಳ ಹಾಗೂ ಶಕ್ತಿಗಳ ಮಹತ್ತ್ವದರಿವು

ಆದಕ್ಕೆ ಇದ್ದಿತು; ಭೌತಿಕ ಶಾಸ್ತ್ರಗಳನ್ನೂ ಚುರುಕು ದೃಷ್ಟಿಯಿಂದ
ಅದು ಅಭ್ಯಸಿಸುತ್ತಿತ್ತು; ವ್ಯವಹಾರಿಕ ಜೀವನಕ್ಕೆ ಬೇಕಾಗುವ ಕಲೆ
ಗಳನ್ನು ಅದು ಚಾತುರ್ಯದಿಂದ ಸಂಗಡಿಸಿಕೊಂಡಿತ್ತು. ಆದರೆ
ಅತಿಭೌತಿಕದೊಡನೆ ಇರುವ ಸರಿಯಾದ ಸಂಬಂಧ ತಿಳಿದುಕೊಳ್ಳದಿದ್ದರೆ
ಭೌತಿಕ ಸೃಷ್ಟಿಗೆ ತಕ್ಕ ಅರ್ಥವೇ ಆಗುವದಿಲ್ಲೆಂಬುದನ್ನು ಅದು
ಕಂಡಿತ್ತು. ಮಾನವನ ಚರ್ಮಚಕ್ಷುವಿಗೆ ಬಿದ್ದಷ್ಟೆಯಾಗಲಿ ಅವನ
ಸಸ್ವದ ಬುದ್ಧಿಗೆ ಹೊಳೆದಷ್ಟೆಯಾಗಲಿ ಸರಿಯೆಂದು ತಿಳಿಯುವದರಿಂದ
ವಿಶ್ವ ಚಕ್ರವ್ಯೂಹದ ರಚನೆಗೆ ಅರ್ಥ ದೊರೆಯಲಾರದು; ಸಾಂತವನ್ನು ಸುತ್ತಿ
ಅನಂತವಿದೆ, ಇಂದ್ರಿಯಿಕದ ಮೇಲೆ ಅತೀಂದ್ರಿಯ ಸೃಷ್ಟಿಯಿದೆ, ದೃಶ್ಯ
ವನ್ನು ಸುತ್ತಿಕೊಂಡು ಅದೃಶ್ಯವಿದೆ, ಮಾನವನಿಗೆ ಆಧಾರವಾಗಿಯೂ
ಅಂತರ್ಗತವಾಗಿಯೂ ಅವನ ದಿನದೆಚ್ಚರದಲ್ಲಿ ಅರಿತರಿಯದೆ ತೋರುವ
ಇತರ ಶಕ್ತಿಗಳಿವೆ ಎಂದೂ ಅದು ಕಂಡು ಕೊಂಡಿದ್ದಿತು. ಇದಲ್ಲದೆ,
ಮಾನವನು ತನ್ನನ್ನು ಮಿಕ್ಕಿ ಮಿಗಿಲಾಗಿ ಘನಗಹನ ಪರಿಪೂರ್ಣತೆಯಿಂದ
ತನ್ನರಿತು ತಾನಾಗಿರುವ ತತ್ತ್ವವೂ ಅದಕ್ಕೆ ಕಾಣದೆ ಹೋಗಲಿಲ್ಲ.
ಈ ತತ್ತ್ವ, ಈಗೀಗ ಐರೋಪ್ಯರ ಕಣ್ಣಿಗೆ ಬಿದ್ದರೂ ಅವರ ಸಾಮಾನ್ಯ
ಬುದ್ಧಿಯ ತೆಕ್ಕೆಗೆ ಮೀರಿದ್ದಾಗಿ ಅವರಿಗೂ ತೋರುತ್ತಿದೆ. ಮನುಷ್ಯ
ನನ್ನು ದಾಟಿ ಇರುವ ದೇವತಾ ಕೋಟಿಯನ್ನೂ, ಕೋಟಿ ದೇವತೆ
ಗಳನ್ನೂ ಮಿಕ್ಕಿರುವ ದೇವನನ್ನೂ, ತನ್ನ ಅನಿರ್ವಾಚ್ಯಾನಂತ್ಯದಲ್ಲಿ ಆ
ದೇವನೇ ಲೀನನಾಗುವದನ್ನೂ ಅದು ಕಂಡಿದ್ದಿತು; ನಮ್ಮ ಜೀವನ
ದಾಚೆಯ ಜೀವಕೋಟಿಗಳನ್ನೂ, ನಮ್ಮ ಸದ್ಯದ ಮನಸ್ಸಿನಾಚೆಗಿರುವ
ಮನದ ಪರ್ವತಾವಳಿಯನ್ನೂ, ಅದಕ್ಕೂ ಆಚೆಗಿರುವ ಆತ್ಮದ ವಿಭೂತಿ
ಗಳನ್ನೂ ಅದು ಕಂಡು ಹಿಡಿದಿತ್ತು. ಆ ಮೇಲೆ, ಅಲ್ಪತ್ವ ಭಯಾದಿ
ಗಳನ್ನು ಹುಟ್ಟ ಅರಿಯದ ತನ್ನ ಅಂತರ್ಜ್ಞಾನದ ಪ್ರಶಾಂತ ಧೀರತೆ
ಯಿಂದಲೂ, ಪಾರಮಾರ್ಥಿಕ, ಬೌದ್ಧಿಕ, ನೈತಿಕ, ಪ್ರಾಪಂಚಿಕಗಳಾ
ಯಾವ ಕೃತಿಯಲ್ಲಿಯೂ ಹಿಮ್ಮೆಟ್ಟದ ಧೈರ್ಯದಿಂದಲೂ, ಮಾನವನ

ತನ್ನ ಜ್ಞಾನ ಇಚ್ಛಾಶಕ್ತಿಗಳನ್ನು ಅಭ್ಯಾಸದಿಂದ ಹರಿತ ಮಾಡಿದ್ದಾದರೆ ನಿರ್ಧಾರಿಸಿದ ಯಾವ ಸಾಧನೆ ಅವಕ್ಕೆ ಅಸಾಧ್ಯವಲ್ಲವೆಂದೂ ಸಾರಿ ಸಾರಿ ಹೇಳಿತು.— "ಮನದ ಪರ್ವತಾವಳಿಗಳನ್ನು ಪಾದಾಕ್ರಾಂತ ಮಾಡಿ, ಆತ್ಮ ಸಂಪನ್ನನಾಗಿ, ದೇವತೆಯಾಗಿ, ದೇವನೊಡನೊಂದಾಗಿ, ಅನಿರ್ವಾಚ್ಯ ಬ್ರಹ್ಮವೇ ಆಗಬಹುದು"— ಎಂದು. ಮತ್ತು ತರ್ಕ ಪುಷ್ಟ ವ್ಯವಹಾರಿಕತೆ ಶಾಸ್ತ್ರೀಯ ಬುದ್ಧಿ, ವ್ಯವಸ್ಥಿತ ಪದ್ಧತಿಗಳಿಂದ ಸಲಕ್ಷಣವಾದ ಅವರ ಚಿತ್ತವೃತ್ತಿಯು ಆ ಸಿದ್ಧಿಗೆ ಹಾದಿಯನ್ನು ತಾತ್ಕಾಲವೇ ಹುಡುಕ ತೊಡಗಿತು. ಈ ಅಂತರ್ದೃಷ್ಟಿಯ ಪ್ರಯೋಗದಲ್ಲಿ ಯುಗಯುಗಗಳನ್ನು ಕಳೆದಿರುವುದರಿಂದಲೇ, ಆ ಪಾರಮಾರ್ಥಿಕತೆ, ಆ ಪ್ರಬಲ ಯೌಗಿಕ ವೃತ್ತಿ, ಅನಂತ್ಯವನ್ನೆ ಕೈಸೆರೆಗೊಂಡು ಅದನ್ನು ಸೂರೆಗೊಳ್ಳಬೇಕೆಂಬ ಆ ಹಂಬಲ, ನಿರ್ಮೂಲವಾಗಲಶಕ್ಯವಾದ ಆ ಧರ್ಮ ಬುದ್ಧಿ, ಆ ಆದರ್ಶವಾದ, ಆ ಯೋಗ, ತತ್ತ್ವಜ್ಞಾನ ಮತ್ತು ಕಲೆಗಳ ಆ ನಿರಂತರವಾದ ಬಲವು ಭಾರತದ ಅಚ್ಚುಕಟ್ಟಿನಲ್ಲಿ ಸೇರಿಕೊಂಡಿವೆ.

## ಪ್ರಾಚೀನ ಭಾರತದ ಶಕ್ತಿ

ಆದರೆ ಇದು ಅವರ ಸಮಗ್ರಭಾವನಾಗಲಿ, ಇಡಿಯ ಚಿತ್ತವೃತ್ತಿಯಾಗಲಿ ಅಲ್ಲ; ಹಾಗೆ ಇರಲಾರದು. ಅಡಿಯಾಧಾರಗಳಿಲ್ಲದೆ ಕನಸಿನ ಇಂದ್ರಜಾಲದಂತೆ ಬರಿಯ ಮೋಡಗಳೊಳಗಿಂದ ಗಿರಿಶಿಖರಗಳೂ ಮೂಡಲಾರವು; ಬಟ್ಟ ಬಯಲಾದ ಹಾಳು ಭೂಮಿಯಲ್ಲಿ ಪಾರಮಾರ್ಥಿಕತೆಯೂ ವೃದ್ಧಿಹೊಂದಲಾರದು. ಪ್ರಾಚೀನ ಭಾರತವನ್ನು ಪರೀಕ್ಷಿಸಿ ನೋಡಲಾಗಿ ತಮ್ಮ ಕಣ್ಣುಂಬುವ ಇನ್ನೊಂದು ಮಾತೆಂದರೆ, ಅವರ ಅಪರಂಪಾರವಾದ ಪ್ರಾಣಶಕ್ತಿ, ಸೆಲೆಬತ್ತದ ಆಯುರ್ಬಲ ಹಾಗು ಜೀವನಾನಂದ, ಮತ್ತೂ ಊಹೆಗೂ ನಿಲುಕಲಾರದಷ್ಟು ವಿಪುಲ ಫಲಶಾಲಿಯಾದ ಅವರ ನಿರ್ಮಾಣ ಶಕ್ತಿ. ಹೋದ ಮೂರು ಸಾವಿರ ವರ್ಷಗಳವರೆಗೂ- ಅದಕ್ಕೂ ಹೆಚ್ಚೇ ಕಾಲವೆನ್ನಬೇಕು- ಭಾರತವು ಅತಿಯಾಗಿ,

ಅವಿಶ್ರಾಂತವಾಗಿ, ಮರಂಧರಿಯಿಂದ, ಕೊನೆಮೋರದ ಅನೇಕ ಮುಖತೆ ಯಿಂದ ಸೃಷ್ಟಿಕಾರ್ಯ ನಡೆಸಿವೆ . ಗಣರಾಜ್ಯ-ಮಂಡಲ-ಸಾಮ್ರಾಜ್ಯ ಗಳು; ತತ್ತ್ವ-ವಿಶ್ವೋತ್ಪತ್ತಿ- ವಸ್ತುವಿಜ್ಞಾನ ಶಾಸ್ತ್ರಗಳು; ಮತಪಂಥ -ಕಲೆ ಕಾವ್ಯಗಳು; ವಿವಿಧವಾದ ಸ್ಮಾರಕ ರೂಪದ ಚೈತ್ಯ-ಕೀರ್ತಿಸ್ತಂಭ- ಶಾಸನಗಳು; ರಾಜಮಂದಿರ - ದೇವಾಲಯ - ಕೆರೆಕಾಲುವೆ - ಸಾಗರ- ಸಮುದ್ರಗಳು; ಸಂಗಡ - ಸಂಘ - ಮತ - ಶಾಲೆಗಳು; ಧರ್ಮಶಾಸ್ತ್ರ- ವ್ಯವಹಾರನೀತಿ— ವಿಧಿ ವಿಧಾನಗಳು; ಪದಾರ್ಥವಿಜ್ಞಾನ— ಮನೋ ವಿಜ್ಞಾನಗಳು; ಯೋಗ ಪದ್ಧತಿಗಳು, ರಾಜನೀತಿ ಶಾಸ್ತ್ರ ಅರ್ಥಶಾಸ್ತ್ರಗಳು ಲೌಕಿಕ ಆಗಮಿಕ ಕಲೆಗಳು; ವ್ಯಾಪಾರ ಉದ್ಯೋಗ ಕುಶಲ ಕರ್ಮಗಳು;- ಹೀಗೇಪಟ್ಟಿಯನ್ನು ಪ್ರತಿ ವಿಷಯದಲ್ಲೂ ಬೆಳೆಸುವಷ್ಟು; ಪಿತ್ರಾತಲೆಗೇರಿ ದಂತೆ ಕಾರ್ಯೋನ್ಮಾದವು ಕಂಡು ಬರುವಂತಿದೆ. ಭಾರತವು ಸೃಷ್ಟಿವಿಸ್ತಾರ ಮಾಡೇಮಾಡಿತು; ತಣಿವಿಲ್ಲ, ದಣಿವಿಲ್ಲ, ಮುಗಿತಾಯವಿಲ್ಲ, ಜಪ್ಪ ಜಾಪತ್ತು ಎಂದು ಬೀಳು ಬಿದ್ದುಕೊಳ್ಳಲೂ ವಿರಾಮಕಾಲವೂ ಇಲ್ಲ. ಭರತಖಂಡದ ಸೀಮೆದಾಟಿ ಅದು ಹೊರಹೊಮ್ಮಿ ಭಾರತದ ನೌಕೆಗಳು ಸಾಗರಗಳಾಚೆಗಿರುವ ಯಹೂದಿಸ್ಥಾನ, ಐಗುಪ್ತ, ರೋಮಕಗಳಲ್ಲಿ ತಮ್ಮ ಭಾಗ್ಯದ ಭಾಗೀರಥಿಯನ್ನು ಹರಿಯಿಸಿದವು; ಯವಸುಮಾತ್ರಾದಿ ಬಹು ದ್ವೀಪ ಸಂಘಾತದಲ್ಲಿಯೂ ಇಲ್ಲಿಂದ ವಲಸೆ ಹೋದವರು ಕಲೆ, ಇತಿ- ಹಾಸ ಮತಗಳನ್ನು ಹರಡಿದರು; ಮೆಸೊಪೊಟೇಮಿಯಾದ ಮಳಲಿ ನಲ್ಲಿಯೂ ಭಾರತದ ಹೆಜ್ಜೆ ಗುರುತು ಮೂಡಿಕೊಂಡುವು; ಬೌದ್ಧ ವೇದಾಂತಾದಿ ಧರ್ಮಗಳು ಚೀನ ಜಾಪಾನುಗಳನ್ನುಗೆದ್ದು, ಪಶ್ಚಿಮ ದಲ್ಲಿ ಪಾಲಿಸ್ತಾನ ಅಲೆಗ್ಸಾಂಡ್ರಿಯಾ ಪಟ್ಟಣಗಳವರೆಗೂ ಹಬ್ಬಿದವು; ಕೊನೆಗೆ, ಉಪನಿಷತ್ತಿನ ರೂಪಕ ಕಟ್ಟುಕಥೆಗಳೂ, ಬೌದ್ಧರ ಜಾತಕ ಧರ್ಮಪಾದಿಗಳೊಳಗಿನ ವಚನಗಳು ಯೇಸು ಕ್ರಿಸ್ತನ ತುಟಿಯ ಮೇಲೂ ಒಡಮೂಡಿ ಪ್ರತಿಧ್ವನಿಗೊಂಡವು. ಎಲ್ಲಿ ನೋಡಿದಲ್ಲಿ, ಭಾರತದ ಕ್ಷೇತ್ರದಂತೆ ಆದರ ಕಾರ್ಯರಂಗದಲ್ಲಿಯೂ ಮಿತಿಮೀರಿದ ಅತಿ ವಿಪುಲ

ವಾದ ಜೀವನದ ತ್ರಾಣವು ತುಂಬಿ ತುಳುಕುವದು. ಭಾರತದ ಪ್ರಾಚೀನ ಕಲೆ, ಶಿಲ್ಪ, ವಾಸ್ತುಗಳಲ್ಲಿ ಮೌನವಿಲ್ಲ, ವಿರಾಮವಿಲ್ಲ, ತೆರವಿಲ್ಲವೆಂದೂ, ಮುಷ್ಟಿಯಷ್ಟಿಲ್ಲ ಚಿಕ್ಕದಾದ ಒಂದು ಖಂಡದಲ್ಲಿಯೂ ಇಡೀ ಬ್ರಹ್ಮಾಂಡವನ್ನೆ ತುರುಕುವ ಪ್ರವೃತ್ತಿ ಕಂಡು ಬರುವದೆಂದೂ ಐರೋಪ್ಯ ವಿಮರ್ಶಕರು ಗೊಣಗುಟ್ಟುವದುಂಟು. ಅಹುದು, ಇದು ದೋಷವಿರಲಿ ಇರದಿರಲಿ, ಭಾರತ ಶಕ್ತಿಯ ಫಲಫಲಿಸುವ ಆನಂತ್ಯಕ್ಕೂ ಬಾಳು ಬದುಕಿನ ವೆಗ್ಗಳತೆಗೂ ಇದು ಅಗತ್ಯವೇ ಆಗಿದೆ. ಅದು ತನ್ನ ವೈಭವವನ್ನು ಸೂರೆ ಮಾಡದೆ ಗತಿಯಿಲ್ಲವೆಂದೇ ಹಾಗೆ ಮಾಡುವದು. ಅನಂತವೇ ಅಣು ಅಣುವಿನಲ್ಲಿ ತನ್ನ ಚೈತನ್ಯ ಶಕ್ತಿಗಳನ್ನು ತುಂಬಿ ಸೂಸುತ್ತಿರಲು ಅದು ಅನಂತವಾಗದೆ ಉಳಿಯಬಹುದೇ?

**ಭಾರತ ಶಕ್ತಿಯ ಗತವೈಭವದ ಸಮಗ್ರ ಸ್ವರೂಪ**

ಆದರೆ ಈ ಪರಮ ಪಾರಮಾರ್ಥಿಕತೆಯೂ, ಜೀವನದ ತ್ರಾಣ ಹಾಗು ಸೃಷ್ಟಿಯ ಆನಂದ ಇವುಗಳ ಬಹು ಫಲ ಸಮೃದ್ಧಿಯೂ ಇವು ಕೂಡಿಕೊಂಡರೂ ಭಾರತ ಶಕ್ತಿಯ ಗತವೈಭವದ ಸಮಗ್ರ ರೂಪವು ತೋರಿ ಬರಲಾರದು. ಅದೇನು, ಅಪಾರವಾದ ಶುದ್ಧ ನೀಲಾಕಾಶದ ಕೆಳಗೆ ಅಡ್ಡಾದಿಡ್ಡಿಯಾಗಿ ಬೆಳೆದ ಉಷ್ಣ ವಲಯ ಸಹಜವಾದ ಸಸ್ಯ ಪ್ರಪಂಚವಲ್ಲ. ಇಂಥ ವೈಭವವನ್ನು ಕಂಡರಿಯದ ಕಣ್ಣುಗಳಿಗೆ ಮಾತ್ರ ಅದು ಸಂದಿಯಲ್ಲಿ ಗೊಂದಲಗೆಟ್ಟ ಜೀವನದ ಸಮಾರಾಧನೆಯಾಗಿಯೂ, ಮಿತಿಗೆಟ್ಟ ಮುಂದುಗಾರಿಕೆಯ ಅತಿ ಕ್ರಮವಾಗಿಯೂ, ರೇಖೆ, ಪ್ರಮಾಣ, ಪದ್ಧತಿಯರಿಯದ ಸ್ವಚ್ಛಂದತೆಯಾಗಿಯೂ ತೋರುವದು. ಭಾರತದ ಆದಿಶಕ್ತಿಗೆ ಬುದ್ಧಿ ಬಲವೊಂದು ಮೂರನೆಯ ಆಯುಧವಾಗಿತ್ತು. ವಿರಕ್ತಿಯೊಡನೆ ವೈಭವವೂ, ಪುಷ್ಟಿಯೊಡನೆ ಸೂಕ್ಷ್ಮತೆಯೂ, ಸಬಲತೆಯೊಡನೆ ನಯವೂ, ತಾತ್ತ್ವಿಕ ಅದ್ಭುತಾಕಾರದೊಡನೆ ವಿಚಿತ್ರ ಕೌತುಕಮಯ ವಿವರವೂ, ಅದರಲ್ಲಿ ಒಂದುಗೂಡಿದ್ದವು. ಅದರ ಪ್ರಮುಖ

ಪ್ರೇರಣೆಯೇನೋ ಕ್ರಮ - ರಚನೆಗಳನ್ನೇ ಮುಮುಕ್ಷುವಾಗಿದ್ದರೂ, ತ್ರಿಕರಣ ಪೂರ್ವಕವಾಗಿ ಅದು ಅನುಷ್ಠಾನಕ್ಕೆ ಬರುವಂತೆ ಅವುಗಳ ಅಂತಃಸತ್ತ್ವ ಹಾಗೂ ಆಂತರಿಕ ಧರ್ಮಗಳನ್ನು ಕಾಣಲು ಅದು ಹವಣಿ ಸುತ್ತಿತ್ತು. ಹಿಂದುಸ್ಥಾನವು ಧರ್ಮ ಮತ್ತು ಶಾಸ್ತ್ರಗಳ ಪ್ರಖ್ಯಾತ ಭೂಮಿ. ಅದು ಜೀವ ಜಗತ್ತುಗಳ ಪ್ರವೃತ್ತಿಯ ಅಂತಃಸತ್ವ ಹಾಗು ಆಂತರಿಕ ಧರ್ಮಗಳನ್ನು ಸಂಶೋಧಿಸಿತು; ಅದು ದೊರಕಿದೊಡನೆಯೇ, ಅವನ್ನು ಜೀವನದ ವ್ಯಾಪಾರದಲ್ಲಿ ಮೂಡಿಸುವದಕ್ಕಾಗಿ, ಅದರ ಪ್ರಯೋಗ ವ್ಯವಹಾರಗಳಿಗಾಗಿ ಪದ್ಧತಿ ಪ್ರಕಾರಗಳನ್ನು ಕ್ರಮಗೊಳಿಸಿತು. ಆತ್ಮ ಸಂಪಾದನೆಯಿಂದ ಭಾರತದ ಪ್ರಥಮ ಕಾಲವು ಬೆಳೆದರೆ, ಧರ್ಮ ಸಂಸ್ಥಾಪನೆಯಲ್ಲಿ ಅದರ ದ್ವಿತೀಯ ಕಾಲವೂ, ಶಾಸ್ತ್ರೀಯ ಸಿದ್ಧಾಂತ ಗಳಲ್ಲಿ ಅದರ ವಿವರ ವಿವೇಚನೆ ಮಾಡುವದರಲ್ಲಿ ಅದರ ತೃತೀಯ ಕಾಲವೂ ಕಳೆಯಿತು. ಇವು ಮೂರೂ ಭಿನ್ನವಿದ್ದರೂ ಯಾವಾಗಲೂ ಒಂದನ್ನು ಬಿಟ್ಟು ಒಂದಿಲ್ಲ.

**ಭಾರತದ ನಿರ್ಮಾಣ ಶಕ್ತಿಯು ಅತ್ಯದ್ಭುತವಾದುದು**

ಈ ತೃತೀಯ ಕಾಲದಲ್ಲಿ ಪ್ರಪಂಚವೇ ಒಂದು ಶಾಸ್ತ್ರವೂ ಕಲೆಯೂ ಆಗಿ ಬೆಳೆದು ಅಸಾಧಾರಣ ಪ್ರಮಾಣದಲ್ಲಿ ವಿಕಾಸಗೊಂಡು ವಿಚಿತ್ರ ತರವಾದ ವಿಸ್ತಾರವನ್ನು ಹೊಂದಿತು. ಅಶೋಕನ ಕಾಲದಿಂದ ಮಹ- ಮ್ಮದೀಯರ ಮನ್ವಂತರ ವರೆಗೆ ಭರತಖಂಡದಲ್ಲಿ ಬರೆಯಲಾದ ಗ್ರಂಥ ರಾಶಿಯಲ್ಲಿ ನೂರಕ್ಕೆ ಹತ್ತಾರು ಪಾಲೀ ನಮ್ಮ ಕೈಗೆ ಸಿಕ್ಕಿ ದ್ದರೂ, ಸಿಕ್ಕ ಗ್ರಂಥಗಳಲ್ಲಿ ಕೆಲವೊಂದರ ವಿಮರ್ಶೆಯನ್ನು ಇತ್ತೀಚಿನ ಪಂಡಿತರು ಮಾಡಿದ್ದರೂ, ಅದನ್ನಷ್ಟೆ ನಿರೀಕ್ಷಿಸಿದರೂ ಇಲ್ಲಿಯ ನಿರ್ಮಾಣ ಶಕ್ತಿಯೇ ಅತ್ಯದ್ಭುತವಾದುದೆಂದು ಎನಿಸದಿರಲಾರದು. ಇಂಥ ಬೌದ್ಧಿಕ ಪ್ರವೃತ್ತಿ ಪ್ರಯತ್ನಗಳಿಗೆ ಸರಿ ಜೋಲುವ ಐತಿಹಾಸಿಕ ಉದಾಹರಣೆಯು; ಅದೂ ಕೂಡ ಮುದ್ರಣದ ಹಾಗೂ ಆಧುನಿಕ ವೈಜ್ಞಾನಿಕ ಸೌಕರ್ಯ

ಗಳಾಗುವ ಪೂರ್ವದಲ್ಲಿ— ಒಂದು, ಎಷ್ಟು ಸಂಶೋಧನೆ, ಏನು ಪಾಂಡಿತ್ಯ, ಎಂಥ ಸೂಕ್ಷ್ಮ ವಿಚಾರ ವಿಸ್ತಾರ! ಮತ್ತು ಇದೆಲ್ಲವೂ ಸ್ಮರಣ ಶಕ್ತಿಯ ಕಂಠ ಪಾಠದಿಂದಲೂ ಗೆಸ್ದಲಿಯ ಬಾಯಿಂದ ಬದುಕಲಾರದ ತಾಳೆಗರಿಗಳ ಸಹಾಯದಿಂದಲೂ ಸಾಧಿಸಿದ್ದುದು ಅಸಾಧ್ಯವಾಗಿಯೇ ತೋರುವದು. ಗೊಮ್ಮಟನಂತೆ ಅತ್ಯುನ್ನತವೂ ಗಂಭೀರ ಸುಂದರವೂ ಆದ ವಾಙ್ಮಯವು ಬರಿ, ತತ್ತ್ವ, ಬ್ರಹ್ಮವಿದ್ಯೆ, ಮತಧರ್ಮಶಾಸ್ತ್ರ, ಯೋಗ, ತರ್ಕ-ನ್ಯಾಯ, ಅಲಂಕಾರ, ವ್ಯಾಕರಣ, ನಿರುಕ್ತ, ಕಾವ್ಯ, ನಾಟಕ, ವೈದ್ಯಕ, ಜ್ಯೋತಿಷ್ಯ, ಮೊದಲಾದ ಶಾಸ್ತ್ರಗಳಲ್ಲಿಯೇ ತೀರ ಲಿಲ್ಲ. ಅದು ಜೀವನಸವನ್ನೆ ತಬ್ಬಿಕೊಂಡು ರಾಜನೀತಿ, ಧರ್ಮಶಾಸ್ತ್ರ, ಚಿತ್ರನರ್ತನಾದಿ ಅರುವತ್ತು ನಾಲ್ಕು ಕಲೆಗಳು,— ಅಂತೂ ಜೀವನಕ್ಕೆ ಯಾವಾವುದು ಉಪಯೋಗಿಕವೋ, ಮನಸ್ಸಿಗೆ ಯಾವಾವುದು ರಂಜ-ಕವೋ, (ಅವರಲ್ಲಿ ಗಜತುರಗ ಶಿಕ್ಷೆ ವೈದ್ಯಕಗಳೂ, ಅದರ ಶಾಸ್ತ್ರ, ಆಯಾ ಕಲೆ ಆಯಾ ಪ್ರತ್ಯೇಕ ಪರಿಭಾಷೆ, ಅದರ ಪರಂಪರಾಗತ-ಸಾಹಿತ್ಯ ಹೀಗೆ ಮತ್ತೆ ಎಲ್ಲ ಬರುವವು.) ಅವೆಲ್ಲವೂ ವಾಙ್ಮಯ ಪ್ರಪಂಚಕ್ಕೆ ಸೇರಿತ್ತು. ಮಹತ್ತರ ಮತ್ತು ಮಹತ್ತ್ವವುಳ್ಳ ವಿಷಯಗಳಿಂದ ಮೊದಲು ಮಾಡಿ ಅತ್ಯಲ್ಪವೂ ಕ್ಷುದ್ರವೂ ಆದ ವಿಷಯಗಳ ವರೆಗೆ ಪ್ರತಿಯೊಂದಕ್ಕೂ ಕೂಲಂಕಷವಾದ ಸಮೃದ್ಧವಾದ, ಸೂಕ್ಷ್ಮವಾದ, ಪ್ರವೀಣವಾದ ಬುದ್ಧಿಯ ಉಪಯೋಗವಾಗಿತ್ತು. ತನ್ನ ತಾನರಿತು ಕೊಳ್ಳಬೇಕೆಂಬ ಜೀವನ ಜಿಜ್ಞಾಸೆಯ ತೃಪ್ತಿಯರಿಯದ ಕುತೂಹಲವೊಂದು ಕಡೆಗೆ!— ವ್ಯವಸ್ಥೆಯಿಂದ, ವಿಚಾರಪೂರ್ವಕ ಕ್ರಮದಿಂದ, ಸಮತೂಕ ಸಮತಾಲದ ಜ್ಞಾನ ಸಾಮರಸ್ಯದಿಂದ ಪ್ರಪಂಚದಲ್ಲಿ ಹೆಜ್ಜೆ ಹಾಕಬೇಕೆಂಬ ಆಸೆ ಇನ್ನೊಂದು ಕಡೆಗೆ! ಹೀಗಾಗಿ, ರಕ್ತಗತವಾಗಿ ಪರಮ ಪ್ರಾಧಾನ್ಯ ವನ್ನು ಪಡೆದ ಪಾರಮಾರ್ಥಿಕತೆಯೂ, ಸೆಲೆಬತ್ತದ ಪ್ರಾಪಂಚಿಕ ಪ್ರಾವೀಣ್ಯ ಪ್ರವಾಹವೂ, ಜೀವನದಲ್ಲಿ ಅತ್ಯದ್ಭುತ ಉತ್ಸಾಹವೂ, ಇವೆಲ್ಲಕ್ಕೂ ಮಧ್ಯಸ್ಥವಾಗಿ ಬಲವಾದ ಕುಶಾಗ್ರತೆಯುಳ್ಳ ವಿಚಿಕಿತ್ಸೆಯ

ಬುದ್ಧಿಯೂ, ತಾರ್ಕಿಕ, ನೈತಿಕ, ರಸಿಕವಾದ ಪರಮ ತೀವ್ರ ವೃತ್ತಿಯ, ಚಿತ್ತವೂ ಕೂಡಿಕೊಂಡು ಪ್ರಾಚೀನ ಭಾರತೀಯ ಸಂಸ್ಕೃತಿಯ ಸಮಂಜಸತೆಯು ಉಂಟಾಗಿತ್ತು.

**ಭಾರತೀಯ ಪಾರಮಾರ್ಥಿಕದ ವಿಸ್ತಾರ ಸ್ವರೂಪ**

ತನ್ನ ಪಾರಮಾರ್ಥಿಕ ಒಲವುಗಳಿದ್ದಾಗ್ಗೆಯೂ, ಭಾರತಕ್ಕೆ ಇಷ್ಟು ಸಮೃದ್ಧ ಪ್ರಾಣಶಕ್ತಿಯೂ, ಇಷ್ಟು ಸಮೃದ್ಧ ಬುದ್ಧಿ ಬಲವೂ ಇರದಿದ್ದರೆ ಈಗಾವಷ್ಟು ಕಾರ್ಯವೂ ಎಂದೆಂದೂ ಆಗುತ್ತಿರಲಿಲ್ಲವೆಂಬುದಂತೂ ನಿಜವೇ. ಬೆದರಿ ಎದೆಗುಂದಿದ ಬುದ್ಧಿ ಹಾಗು ಆರಿಹೊಟ್ಟೆಯಿರುವ ಜೀವನಗಳುಳ್ಳ, ಕಸುವುಗೆಟ್ಟ ಭೂಮಿಯಲ್ಲಿ ಪಾರಮಾರ್ಥಿಕತೆಯು ಹುಲಸಾದ ಬೆಳೆ ಬರುವವೆಂದು ತಿಳಿಯುವದು ದೊಡ್ಡ ತಪ್ಪು. ಇಷ್ಟು ಮೊರಿ ಇಂಥಲ್ಲಿ ಪಾರಮಾರ್ಥಿಕತೆಯು ಮೇಲೆ ಎಷ್ಟೋ ಮಲ ಮಲನೆ ಬೆಳೆದಂತೆ ತೋರಿದರೂ ಅಸ್ಥಿಗತ ಜ್ವರವುಳ್ಳ ರೋಗಿಷ್ಟನ ತೋರಿಕೆಯ ಮೆತ್ತನ್ನ ತನದಂತಿದ್ದು, ಅದು ಒಮ್ಮೆ ಕೆಟ್ಟಿತೆಂದರೆ ಮರ ಕಳಿಸಿದ ಬೇನೆಯಂತೆ ಭಯಂಕರವಾಗಿ ಪರಿಣಮಿಸುವದು. ಜನಾಂಗ ಸಕಲ ಸಂಪನ್ನತೆಯಿಂದ ಬಾಳಿ ಬದುಕು ಮಾಡಿ, ಅತಿಗಾಢವಾಗಿ ಬಗೆದು ವಿವೇಕಿಸಿ ನೋಡಿದಾಗ ಪಾರಮಾರ್ಥಿಕತೆಯು ತನ್ನ ಗಾಂಭೀರ್ಯ ಉನ್ನತಿಯನ್ನು ಪಡೆದು ಅನೇಕಾಂಗಗಳಲ್ಲಿ ಅನವರತವಾಗಿ ಫಲದಾಯಕವಾಗುವದು. ಆಧುನಿಕ ಇರೋಪಿನಲ್ಲಿ ಪ್ರಾಣಶಕ್ತಿಯ ಸ್ಫೋಟ ಪರಂಪರೆಗಳಾದ ಮೇಲೆ, ಬುದ್ಧಿಯ ಅತಿ ಪ್ರಚಂಡ ಕಾರ್ಯ ಪ್ರಪಂಚವು ವಿಸ್ತರಿಸಿದ ಅನಂತರದಲ್ಲಿ ಪಾರಮಾರ್ಥಿಕತೆಯು ಪ್ರಪಂಚ ಮಾಯಾ ವ್ಯಾಧಿಯನ್ನು ಕಳೆಯಬಂದ ಸುಡುಗಾಡಸಿದ್ಧನ ಶೂನ್ಯವಾದ ಬಿಟ್ಟು, ವಿಪುಲ ವಿಶಾಲವಾದ ಘನ — ವಿವೇಕ ವೈಶಾರದ್ಯದಿಂದ ಓಂ ಪ್ರಥಮವೆಂದು ನನೆ ಕೊನೆದೋರುತ್ತಿದೆ. ಭಾರತೀಯ ಅಧ್ಯಾತ್ಮದಲ್ಲಿ ಜಗನ್ಮಿಥ್ಯಾವಾದಿಗಳ ಹಾಗು ಬೌದ್ಧ ಶೂನ್ಯವಾದಿಗಳ ವಿಚಾರದಿಂದ ಐರೋ

ಸ್ಯರ ಚಿತ್ತವು ಆಕರ್ಷಿತವಾಯಿತು. ಆದರೆ ತನ್ನ ಅವನತಿಯ ಕಾಲ ದಲ್ಲಿ ಕಟ್ಟುಕಟ್ಟಳೆ ಮೀರಿ ಅಡ್ಡತಿಡ್ಡವಾಗಿ ಬೆಳೆದ ಈ ವಿಚಾರ ಶಾಖೆಯು ಭಾರತೀಯ ತತ್ತ್ವಜ್ಞಾನಪೋಲವಿನ ಒಂದಂಗ ಮಾತ್ರ ವಾಗಿದೆ. ಪ್ರತಿ ಉದ್ದೇಶವನ್ನೂ ಉದ್ದೇಶದಲ್ಲಿ ಪರಮ ಪ್ರಾವೀಣ್ಯ ವನ್ನೂ ಪಡೆಯಲು ಪಾರಮಾರ್ಥಿಕ, ಬೌದ್ಧಿಕ, ನೈತಿಕ, ಪ್ರಾಪಂಚಿಕ ಸರಣಿಯ ತುಟ್ಟತುದಿಗೆ ಹೋಗಿಯೂ, ಆಳದ ನೆಲದ ನೆಲೆ ಮುಟ್ಟಿ ನೋಡಿಯೂ ಬರಬೇಕೆಂಬ ಪ್ರಚೋದನೆಯು ಭಾರತೀಯ ಚಿತ್ತದ ಒಂದು ದಿಕ್ಕಿನ ಪರಿಣತವಾಗಿ ಅದರ ಕಾರ್ಯ ಪ್ರಪಂಚದಲ್ಲೆಲ್ಲ ಸಾಮಾನ್ಯವಾಗಿ ಕಂಡು ಬರುವದು. ಅದರಷ್ಟಕ್ಕೆ ಅದೂ ಒಂದು ಪರಿ ಣಾಮ ಮಾತ್ರ. ಎಲ್ಲ ವಿವರವನ್ನಷ್ಟೇ ಅಲ್ಲ, ಆದರೆ ಅದರದರ ಗಹನ ಗಾಢತೆ, ಪರಮ ಶಿಖರ; ಅದರ ಆನಂತ್ಯ, ಅದರ ಕೈವಲ್ಯವನ್ನು ಕಾಣಬೇಕೆಂಬುದು ಭಾರತೀಯ ಚಿತ್ತದ ಸಹಜ ವೃತ್ತಿಯ ಭಾಗವೇ ಆಗಿದೆ. ಅಲಂಕಾರಕ್ಕಾಗಿಯಾದರು ಅತಿಶಯ ಮಾಡದಿದ್ದರೆ ಜ್ಞಾನ ವಿಚಾರಾನುಭವಗಳಿಗೆ ಸಾಮಾನ್ಯ ಮನಸ್ಸಿನ ಜಡವೃತ್ತಿಯು ತಂದೊ-ಡ್ಡುವ ಅಡ್ಡಿಗಳನ್ನು ಕಡಿದು ಹಾಕಲಾಗುವದಿಲ್ಲ. ಮತ್ತು ಸರಿಯಾದ ಸುಳಿ ನೋಡಿ ಏಟು ಇಕ್ಕುವದರಲ್ಲಿ ನಿಸ್ಸೀಮ ಧೈರ್ಯವೂ ಖಂಡಿತ ವಾದ ಹಿಡಿತವೂ ಬಂದಿತ್ತು. ಪರಮಾರ್ಥಾನುಭವದ ಟೊಂಗೆಗಳು ಹೇಗೆ ಬೆಳೆದವರೂ, ಅದಕ್ಕೆ ದರ್ಶನಗಳ ಅನೇಕಾನೇಕ ಟಿಸಳುಗಳು ಒಡೆದವರೂ ತುದಿ ತುದಿಗಳಿಂದ ಬೊಡ್ಡೆಯನ್ನೂ ಬೊಡ್ಡೆಯಿಂದ ಅಗ್ರಾಗ್ರ ಗಳನ್ನೂ ನೋಡಿದರೆ ನಿಜದ ವಿಭೂತಿಯ ಸಮಗ್ರ ದರ್ಶನವಾದರೂ ಎಂತಾದೀತೆಂದು ನೋಡಲು ಅದು ತವಕಪಡುತ್ತಿತ್ತು. ಪೂರ್ಣ ವಾದ ದೈವಿ ಪ್ರಕೃತಿಯನ್ನೂ, ಪ್ರಕೃತಿ ಮೀರಿ ಎಲ್ಲಿಯ ವರೆಗೆ ದೃಷ್ಟಿ ಚಾಚ ಬರುವದೊ ಅದೆಲ್ಲವನ್ನೂ, ಇವೆರಡನ್ನೂ ಮಿಕ್ಕಿ ಮಿಗಿಲಾಗಿ-ರುವ ಮತ್ತೊಂದನ್ನೂ ಕೂಡ ನೋಡಲು ಅದು ಹವಣಿಸಿತು. 'ಸರ್ವಂ ಶೂನ್ಯಂ' ಎಂದು ವಿಜ್ಞಾನ ಕೈವಲ್ಯದಲ್ಲಿ ಪಾರಮಾರ್ಥಿಕ

ನಾಸ್ತಿಕವಾದವನ್ನು ಹೊಡಿವಾಗಲು ಅದು ತನ್ನ ದೃಷ್ಟಿಯನ್ನು ಅತ್ಯುತ್ತುಂಗ ಶೃಂಗಾಗ್ರಕ್ಕೇರಿಸಿತು; ತೃಪ್ತಿಯರಿಯದ ಬೌದ್ಧಿಕ ಕುತೂಹಲದ ಜಾಜ್ವಲ್ಯದಲ್ಲಿ ವೇದವಲ್ಲದೆ ಬೇರೆ ಬ್ರಹ್ಮವಿಲ್ಲ ಎಂದೆನ್ನುವ ಚಾರ್ವಾಕರ ಭೌತಿಕ ನಾಸ್ತಿಕವಾದ ದರ್ಶನವೂ ಒಂದು ಕಟಾಕ್ಷ ವಿಕ್ಷೇಪ ಮಾತ್ರವಾದರೂ, ನೀತಿವಾದ ಮತ್ತು ತತ್ತ್ವವಾದಗಳ ಭೀತಿಯಿಲ್ಲದೆ ಮುಚ್ಚು ಮರೆಯಿಲ್ಲದ ಬಿಚ್ಚುಬಗೆಯ ರೀತಿಯಲ್ಲಿ ತನ್ನ ಸಿದ್ಧಾಂತವನ್ನಿಟ್ಟಿತು

## ಭಾರತ ಮನೋವೃತ್ತಿಯು ಕೇವಲ ಪಾರಮಾರ್ಥಿಕ ಹಾಗೂ ನೈತಿಕವಾಗಿರದೆ ಬೌದ್ಧಿಕವೂ ಕಲಾಸುಭಾಗಿಯೂ ಆಗಿರುವುದು

ಎತ್ತ ನೋಡಿದರೂ ಈ ಒಲವೇ ತೋರಿಬರುವುದು ಭಾರತೀಯ ಚಿತ್ತದ ಆಯಾಮಗಳಲ್ಲಿ ಮಾನವ ಜೀವದ ಆತ್ಮ ಪ್ರತಿಪಾದನೆಯ ಪರಾಕಾಷ್ಠೆಯೊಡನೆ ಸ್ವಾತಂತ್ರ್ಯ, ಸ್ವಾಧೀನತೆ ಪ್ರಭುತ್ವಗಳ ತೃಷ್ಣೆಯದ್ದೂ ಕೂಡ ಅದರ ಸಂಗಡವೆ ಆತ್ಮಯಜ್ಞ, ಆತ್ಮಾರ್ಪಣ, ಅವಲಂಬನ, ದಾಸ್ಯಗಳ ಪರಮಾವಧಿಯೂ ಕಂಡುಬರುವುದು. ಸಂಸಾರದಲ್ಲಿ ಸಮೃದ್ಧ ಜೀವನದ ಆದರ್ಶವೂ ಅಕಿಂಚನ ವೃತ್ತಿಯ ಆದರ್ಶವೂ ಇದ್ದುವಲ್ಲದೆ, ಒಂದು ಸರ್ವಾಗ್ರಣಿ ಸಾರ್ವಭೌಮ ರಾಜವೈಭವದ ತುದಿ ಕಂಡರೆ, ಇನ್ನೊಂದು 'ಮನಸಿಜ ಕರಿಕುಸ್ತೇ' ಎನ್ನುವ ದಿಗಂಬರತೆಯು ತನ್ಮಯತೆಯಲ್ಲಿ ಮತ್ತೊಂದು ತುದಿ ಕಂಡಿತ್ತು. ರೂಢ ವಿಚಾರಗಳಿಂದಲೂ ಈಪ್ಸಿತಾರ್ಥಗಳ ಆಸೆಯಿಂದಲೂ ಕುರುಡಾಗದಂತೆ ಅವರ ಅಂತರ್ಜ್ಞಾನದ ದೃಷ್ಟಿಯು ಸಾಕಷ್ಟು ಸ್ವಚ್ಛವೂ ನಿರ್ಭಯವೂ ಇತ್ತು. ಅವರ ಸಮಾಜ ವ್ಯವಸ್ಥೆಯಲ್ಲಿ ವರ್ಣವ್ಯವಸ್ಥೆಗೆ ಶಿಲಾಶಾಸನ ಹಾಕಿಕೊಟ್ಟರೂ 'ಜ್ಯೋತಿಗೆ ಜಾತಿಯಿಲ್ಲ' ಎಂಬ ಮಾತನ್ನು ಜಾತ್ಯಭಿಮಾನಿಗಳು ತಮ್ಮ ಆವೇಶದಲ್ಲಿ ಮರೆವಂತೆ ಅದು ಎಂದೂ ಮರೆಯಲಿಲ್ಲ, ಕ್ಷುದ್ರ ನರನಲ್ಲಿಯೂ ಅದು ನಾರಾಯಣನ ಮೂರ್ತಿಯನ್ನು

ಕೆಂಡಿತ್ತು. ಮುಂದೆ ಭೇದಗಳನ್ನೆಲ್ಲಗಳೆಯಲೆಂದೇ ಮೊದಲು ಅದು ಭೇದಗಳನ್ನೆ ಒತ್ತಿ ಹೇಳುತ್ತಿತ್ತು. ಮೊದಲಿನ ಗಣರಾಜ್ಯಗಳನ್ನೂ, ಸ್ವತಂತ್ರ ಮಂಡಲಗಳನ್ನೂ ಕೇಂದ್ರೀಕರಣ ವಿರೋಧಿಗಳೆಂದು ತ್ಯಜಿಸಿ, ಏಕಚಕ್ರಾಧಿಪತ್ಯದ ತತ್ತ್ವವನ್ನೆತ್ತಿ 'ನಾಡೆಂಬ ದೇಹಕ್ಕೆ ರೂಢಿಪತಿಯೇ ಪ್ರಾಣ'ನೆಂದೂ ಅವನು ವಿಷ್ಣುವಿನಂಶವೆಂದೂ ಸಾರಿ ಪ್ರಜಾಧಿಪತ್ಯ-ವನ್ನು ಅದು ಬೆಳೆಸದಿದ್ದರೂ, ಅದರ ಹಳ್ಳಿ, ಪಂಡಿತ ಸಭೆ, ಪಂಚರು, ಹಾಗು ದೈವದವರುಗಳಲ್ಲಿ ಪ್ರಜಾಪ್ರಭುತ್ವವನ್ನೆತ್ತಿ ಹಿಡಿದು, ಜನರಲ್ಲಿ ಜನಾರ್ದನನಿರುವನೆಂದೂ, 'ಪ್ರಜಾನುರಂಜನಾದ್ರಾಜಾ'— 'ಎಲೆ ಅರಸೇ, ನೀನು ಪ್ರಜೆಗಳ ಪ್ರಧಾನ ಸೇವಕನು ಮಾತ್ರ' ಎಂದೂ ತನ್ನ ಬಲೋನ್ನತಿಯಲ್ಲಿ ರಾಜರಾಜನಿಗೂ ಅದು ಗಟ್ಟಿಸಿ ಹೇಳಿತು. ಪ್ರತಿಯೊಬ್ಬನು ಸರ್ವ ಸ್ವತಂತ್ರನಾಗಿ ತಾನೇ ತನ್ನ ರಾಜನೆಂಬ ಪಾರಮಾರ್ಥಿಕ ಅರಾಜಕತೆಯು ಅದರ ಸತ್ಯಯುಗದ ಕಲ್ಪನೆಯಾಗಿದೆ. ಅದು ಅತಿಮಾತ್ರವಾಗಿ ಪಾರಮಾರ್ಥಿಕವಾಗಿದ್ದೂ ಶತಕಾನುಶತಕಗಳ ವರೆಗೆ ಐಂದ್ರಿಯಿಕ ಯೋಗ ಭೋಗಗಲ್ಲಿ ಮುಳುಗಾಡದೆ ಬಿಡಲಿಲ್ಲ; ಅಲ್ಲಿಯೂ ಪಂಚೇಂದ್ರಿಯ ಸುಖಾನುಭವದ ಎಳೆಎಳೆಗಳನ್ನೂ, ಫಲ-ಮೂಲಗಳನ್ನೂ ಅಚ್ಚುಕಚ್ಚುಗಳನ್ನೂ ಅದು ತಟ್ಟಿ ಮುಟ್ಟಿ ಸವಿದು ನೋಡಿತು. ಹೀಗಿದ್ದೂ, ಈ ವಿರೋಧಾತಿರೇಕಗಳಿಂದಲೂ ಅಲ್ಲಿ ಅವ್ಯವಸ್ಥೆಯುಂಟಾಗಲಿಲ್ಲವೆಂಬುದು ನೆನಪಿಡತಕ್ಕ ಮಾತು; ಇರೋಪಿನಲ್ಲಿ ಇದೇ ಬಗೆಯ ವೃತ್ತಿಯುಂಟಾದಾಗ್ಗೆ ಅನೇಕ ಸಲ ಅನಿ-ಯಂತ್ರಿತ ಕೀಳು ಹೊಲೆಗಾಲವು ಬಂದಂತೆ ಭರತಖಂಡದಲ್ಲಿ ಅದಕ್ಕೆ ಸರಿ ಹೋಲುವ ಕೊಳೆಗಾಲವು ಎಂಥ ಸುಖಲೋಲುಪತೆಯ ಭೋಗ ಕಾಲದಲ್ಲಿಯೂ ಬರಲಿಲ್ಲ. ಯಾಕೆಂದರೆ ಭಾರತ ಮನೋವೃತ್ತಿಯು ಕೇವಲ ಪಾರಮಾರ್ಥಿಕ ಮತ್ತು ನೈತಿಕವಾಗಿರದೆ ಬೌದ್ಧಿಕವೂ ಕಲಾನು-ರಾಗಿಯೂ ಆಗಿರುವದರಿಂದ ಬುದ್ಧಿಯ ನಿಯಮಿತತೆಯೂ, ಸೌಂದರ್ಯದ ತಾಳ ಲಯಬದ್ಧತೆಯೂ ಇಲ್ಲಿ ಎಂದೂ ಸಂಕರ ಪ್ರಳಯ-

ಕ್ಕೆಡೆಗೊಡಲಿಲ್ಲ. ಭಾರತೀಯ ಪ್ರವೃತ್ತಿಯೆ ಹೀಗಿದೆ. ಪ್ರತಿ ಅತಿರೇಕದಲ್ಲಿಯೂ ಒಂದು ಧರ್ಮವನ್ನೂ ಅದರ ಪ್ರಯೋಗದಲ್ಲಿ ಒಂದು ನಿಯಮ, ಮಾನ, ರಚನೆಯನ್ನೂ ಅದು ಹುಡುಕಿಕೊಳ್ಳುವದು. ಇಷ್ಟಲ್ಲದೆ, ಈ ಅತಿರೇಕದ ನೆಲೆ ನೋಡುವ ಪ್ರವೃತ್ತಿಯೂ, ಇದಕ್ಕೂ ಹೆಚ್ಚಾಗಿಯೇ ವೈಯುಂಡು ಹೋದ ಸಮನ್ವಯ ಪ್ರವೃತ್ತಿಯೊಡನೆ ತೂಕ ಹಿಡಿದು ಎಲ್ಲ ಉದ್ವೇಗಗಳನ್ನೂ ತುಟ್ಟತುದಿಗೊಯ್ದು ನೋಡಿ ಬಂದ ಅನುಭವ-ಜನ್ಯಜ್ಞಾನದಿಂದ ವ್ಯವಹರಣೆ ವ್ಯವಸ್ಥಾಪನೆಗಳಲ್ಲೊಂದು ಸಮತೆ, ತೂಕಗಳನ್ನು ಗಟ್ಟಿ ಹಿಡಿಯುವದು. ಆತ್ಮಸಂಯಮನದಿಂದ ಗ್ರೀಕರು ಪಡೆದ ಸಮತೂಕ, ತಾಳಲಯತ್ವವನ್ನು ಭಾರತವು ತನ್ನ ಬುದ್ಧಿ, ನೀತಿ, ರಸಿಕತೆಗಳ ವ್ಯವಸ್ಥಾ ಪ್ರಿಯತೆಯಿಂದಲೂ ಮನದಲ್ಲಿಯ ಜೀವನದಲ್ಲಿಯ ಪ್ರಚೋದಕವಾಗಿರುವ ಸಮನ್ವಯ ಬುದ್ಧಿಯಿಂದಲೂ ಸಂಪಾದಿಸಿತು.

## ಪರಮಾರ್ಥ ಸಾಧನ ಪ್ರವೃತ್ತಿಯೇ ಭಾರತ ಶಕ್ತಿಯ ಜೀವಸ್ವರವು

ಗತಕಾಲಮಾನದಲ್ಲಿ ಭಾರತೀಯ ಚಿತ್ರಭಾವಗಳ ಯಾವ ಕೆಲವು ಭಾಗಗಳು ಪ್ರಮುಖವಾಗಿ ಕಣ್ಣಿಗೆ ಬಿದ್ದು ಉಳಿದವು ದುರ್ಲಕ್ಷಿತವಾಗಬಹುದೊ ಅವುಗಳನ್ನು ಕುರಿತು ನಾನು ವಿವೇಚಿಸಿದ್ದೇನೆ. ಇತ್ತೀಚಿನ ಲಕ್ಷಣಗಳನಷ್ಟೆ ಲಕ್ಷಿಸಿ ಅವುಗಳೆ ಹೆಚ್ಚಿನವುಗಳೆಂದು ತಿಳಿದರೆ ಭಾರತೀಯ ಗತವೈಭವದ, ಅದರ ನಾಗರಿಕತೆಯ ಸಮಗ್ರಾರ್ಥದ, ಮತ್ತು ಅದಕ್ಕೆ ಪ್ರಾಣದಾಯಕವಾಗಿದ್ದ ಶಕ್ತಿಯ ಅರ್ಥವಾಗದೇ ಹೋಗಿ ಸರಿಯಲ್ಲದ ಯಾವುದೋ ಅಸಂಪೂರ್ಣವಾದ ವಿಚಾರವೊಂದು ಹೊಳೆಯಬಹುದು. ಸಧ್ಯದ ಕಾಲವು ಗತಕಾಲದ ಇಳಿತದ ಹೊತ್ತಿನಲ್ಲಿ ದಂಡೆಗೊಟ್ಟಬಂದ ರೇವೆಯಿದ್ದಂತೆ; ಬರುವ ಕಾಲದ ಪ್ರಾರಂಭ ಬಿಂದುವಿದಾಗಬೇಕಾಗಿರುವದರಲ್ಲಿ ಸಂದೇಹವಿಲ್ಲ ; ಇದರಲ್ಲಿಯೇ ಭಾರತೀಯ ಗತವೈಭವದ ಬೀಜಗಳೆಲ್ಲ ನಷ್ಟವಾಗದೆ ಸುಪ್ತಾವಸ್ಥೆಯಲ್ಲಿ

ಬಿದ್ದಿವೆ; ಹೊಸರೂಪಗಳನ್ನು ಧರಿಸಿ ಬರಲು ಅವು ಹಾದಿ ಕಾಯ್ದು ಕೊಂಡಿವೆ. ಅವನತಿಯೆಂದರೆ ಭಾರತ ಬ್ರಹ್ಮನ ನಿದ್ರಾಕಾಲವಿದ್ದಂತೆ; ಅವನ ಎಚ್ಚರದ ಕಾಲದಿಂದಲೆ ಭಾರತದ ಮಹತಿಯನ್ನು ತಿಳಿಯಬೇಕು. ಬರಲಿರುವ ನವಜನ್ಮವು ಆ ಬ್ರಹ್ಮನ ಕಣ್ದೆರೆವು; ಸೃಷ್ಟಿ ಮಾತ್ರ ಬೇರೆ ಬೇರೆ ರೂಪಗಳನ್ನು ತಳೆದರೂ ಬ್ರಹ್ಮನೇ ಬೇರೆಯಾಗಲಾರನು. ನವಜನ್ಮದ ಸಂಭಾವ್ಯತೆ, ಅದು ಆವಿರ್ಭವಿಸಬಹುದಾದ ಶಕ್ತಿಗಳು, ಅದು ವ್ಯಾಪಿಸಬಹುದಾದ ಕ್ಷೇತ್ರ— ಮೊದಲಾದವುಗಳನ್ನು ನಿಶ್ಚಯಿಸುವಾಗ ವೇದಾಂತಿಕ ಶುಷ್ಕ ವಿಚಾರವೇ ಭಾರತ ಶಕ್ತಿಯ ಏಕಮೇವ ಸ್ಫೂರ್ತಿಯೆಂದೂ ಅವರ ತಾನ ಸಂತಾನವನ್ನೆಲ್ಲ ಪ್ರೇರಿಸುವದರಲ್ಲಿ ಅದೇ ಪ್ರಧಾನವಾಗಿರುವದೆಂಬ ವಿಚಾರವನ್ನು ನಾವು ಕಿತ್ತೊಗೆಯಲುಬೇಕು. ಪರಮಾರ್ಥ ಸಾಧನ ಪ್ರವೃತ್ತಿಯೇ ಅದರ ನಿಜವಾದ ಜೀವಸ್ವರವು; ಆದಾವರೂ ವಿರಸವಾದ ಏಕನಾದವಲ್ಲ; ತನ್ನ ತಾರಸ್ವರದಲ್ಲಿ ತೀವ್ರವಾಗಿದ್ದಷ್ಟೆ, ಹೊಂದುವಳಿಕೆಯ ಹಿಡಿತದಲ್ಲಿದ್ದುಕೊಂಡು ಬಹು ಮುಖವಾಗಿಯೂ ವಿವಿಧವರ್ಣಗಳಲ್ಲಿಯೂ ವ್ಯಕ್ತವಾಗುವಂತಹದು. ಪರಮಾರ್ಥ ಸ್ಫೂರ್ತಿಯೇ ಪ್ರಧಾನ, ಪ್ರಾರಂಭಿಕ, ಸತತ, ಪುನರಾವರ್ತಕ; ಅದೇ ಎಲ್ಲದಕ್ಕೂ ಆಧಾರ. ಭಾರತದ ಪ್ರಥಮ ಮಹಾಯುಗವೇ ಅಧ್ಯಾತ್ಮಯುಗವು, ಕೃತಯುಗವು, ಸತ್ಯಯುಗವು; ಆಗ್ಗೆ ಚೇತನಾಚೇತನ ಜಗತ್ತಿನ ಸತ್ಯದ ತಥ್ಯದ ಬಗ್ಗೆ ಆತ್ಮಾನುಭವ ಅಂತರ್ದೃಷ್ಟಿಗಳಿಂದ ಭಾರತವು ತಪಸ್ಸು ಮಾಡಿ ತಿಳಿಯಲೆಳಸಿತು. ಪ್ರಾರಂಭಕ್ಕೆ ಬಿದ್ದ ಆ ಮುದ್ರೆಯು ಇನ್ನೂ ಅಚ್ಚಳಿಯದೆ ಇರುವದಲ್ಲದೆ ರಾಷ್ಟ್ರಜೀವನದ ಹೆಜ್ಜೆಹೆಜ್ಜೆಗೂ ಪಡೆದ ಅಧ್ಯಾತ್ಮಾನುಭವ ಸಂಪಾದನೆಗಳಿಂದ ಅದರ ಪ್ರಭೆಯು ಬೆಳಗುತ್ತಲೆ ಇದೆ. ಭಾರತದ ಅವನತಿಯ ಕಾಲದಲ್ಲೂ ಅದು ಕಳಕೊಳ್ಳಲಾರದ ವಸ್ತುವೆಂದರೆ ಆ ಅಧ್ಯಾತ್ಮ ಮುದ್ರೆಯೊಂದೇ ಸರಿ.

## ಭಾರತದ ದ್ವಿತೀಯ ಕಾಲದಲ್ಲಿ ಅದರ ಜೀವನ ಹಾಗೂ ಸಂಸ್ಕೃತಿಗಳ ಸೀಮಾರೇಷೆಗಳು ರೂಪಗೊಂಡವು

ಆದರೆ ಈ ಆಧ್ಯಾತ್ಮ ಪ್ರವೃತ್ತಿಯು ಉನ್ಮುಖವಾಗಿ ಕೇವಲ ನಿರಾಕಾರ, ಅಗಮ್ಯ, ಅದೃಶ್ಯಗಳನ್ನೆ ಜಾನಿಸಿಕೊಂಡಿರಲಾರದು; ಅದು ತನ್ನ ಪ್ರಭಾವಳಿಯನ್ನು ಕೆಳಗೆ ಬೀರಿ ಜೀವನದ ವೈಭವವನ್ನೂ ವಿಚಾರದ ವೈವಿಧ್ಯವನ್ನೂ ಆಳವಡಿಸಿ ಕೊಳ್ಳುವದೂ ಉಂಟು. ಆದ್ದರಿಂದ ಭಾರತದ ದ್ವಿತೀಯ ಕಾಲವು ಸುದೀರ್ಘವಾಗಿ ಬುದ್ಧಿ ವೈಭವವನ್ನೂ ನೀತಿಧರ್ಮವನ್ನೂ, ಕರ್ಮಪ್ರವೀಣತೆಯನ್ನೂ ಪ್ರಕಟಿಸಿ ಪಾರಮಾರ್ಥಿಕ ಸತ್ಯದ ಕಾಂತಿಯಲ್ಲಿಯೇ ಜೀವನವನ್ನು ನಿಯಂತ್ರಿಸಿ ವ್ಯವಸ್ಥಿತಗೊಳಿಸಿತು. ಆತ್ಮದ ಯುಗವಾದ ಮೇಲೆ ಧರ್ಮದ ಯುಗವು ಬರತಕ್ಕದ್ದು; ವೇದೋಪನಿಷತ್ತುಗಳಾದ ಮೇಲೆ ಕ್ಷಾತ್ರ ಧರ್ಮದ ದಿಗ್ವಿಜಯ ಪರಾಕ್ರಮಗಳು, ಸಾಮಾಜಿಕ ಕಟ್ಟುನಿಟ್ಟುಗಳು, ಅಂದಬಂಧಗಳು, ವಿಚಾರ, ವಿವೇಕ, ತತ್ತ್ವಜ್ಞಾನಗಳು. ಇದೇ ಕಾಲಕ್ಕೆ ಭಾರತೀಯ ಜೀವನ ಹಾಗು ಸಂಸ್ಕೃತಿಗಳ ಸೀಮಾರೇಷೆಗಳು ರೂಪಗೊಂಡವು ಅಲ್ಲದೆ ಬರುವ ಬೆಳವಣಿಗೆಯ ಲಕ್ಷಣವೂ ಹಣ್ಣಿನ ಗುಣವು ಹೀಚಿನಲ್ಲಿ ಎಂಬಂತೆ ಬೀಜದಲ್ಲಿ ಸೇರಿಬಂದಿತು. ಸಂಸ್ಕೃತದ ಸಂಸ್ಕೃತಿಯು ತನ್ನ ಮಹಾ ಕಾವ್ಯೇತಿಹಾಸಗಳಿಂದ ಬುದ್ಧಿಯ ಕುತೂಹಲವನ್ನೆಲ್ಲ ಕುಸುರು ಕುಸುರಾಗಿ ವಿವರಿಸಿ ಪಾಂಡಿತ್ಯ, ವಸ್ತುವಿಜ್ಞಾನ, ಕಲೆ, ಸಾಹಿತ್ಯ, ಅರ್ಥ—ಕಾಮ— ಧರ್ಮಶಾಸ್ತ್ರಗಳಲ್ಲಿ ಹಬ್ಬಿ ಹರುಹಿಕೊಂಡಿತು. ಸಾತ್ತ್ವಿಕ ಸೌಂದರ್ಯವನ್ನಷ್ಟೆ ಅಲ್ಲ, ಆದರೆ ರಾಗರಸಗಳ ಶುದ್ಧ ಭೋಗವನ್ನೂ ಐಂದ್ರಿಯಿಕ ಕಾಮಾನುಭವದ ನೆಲೆಯನ್ನೂ ಅದು ಮುಳುಗಾಡಿ ನೋಡಿತು. ಆದರೂ ಈ ವಿಚಾರ ವ್ಯವಹಾರ ಬೆಂಬದಿಗೆ ಪುರಾತನ ಆಧ್ಯಾತ್ಮಿಕತೆಯು ಸುಪ್ರತಿಷ್ಠಿತವಾಗಿತ್ತು. ಆ ಮೇಲಿನ ಕಾಲದಲ್ಲಿ ಪ್ರಾಪಂಚಿಕ ವ್ಯವಹಾರದ ಮೇಲೂ

ಪರಮಾರ್ಥದ ನೆರಳು ಬಿದ್ದು ಜೀವನಕ್ಕೇ ಒಂದು ಉನ್ನತ ಅವಸ್ಥೆ ಪ್ರಾಪ್ತವಾಯಿತು. ಪುರಾಣಗಳು, ತಂತ್ರಗಳು ಭಕ್ತಿಪ್ರಧಾನ ಮತ ಧರ್ಮಗಳು ಅವನ್ನೆ ಸಾರಿ ಬೀರಿದವು. ಚೈತನ್ಯ ಪಂಥೀಯ ವೈಷ್ಣವ ಧರ್ಮವು ಭಾರತ ಶಕ್ತಿಯ ಕೊನೆಯ ಸುಕುಮಾರ ಕುಸುಮವು. ಅದು ರಸಭಾವ ಭೋಗಗಳನ್ನು ಪರಮಾರ್ಥದ ಸೇವೆಗೆ ಸಲ್ಲಿಸಿತು. ಅಂತೂ ಅಲ್ಲಿಗೆ ಪರಮಾರ್ಥ ಚಕ್ರದ ಒಂದು ಸುತ್ತು ಮುಗಿಯಿತು.

## ಭಾರತ ಭ್ಯಾಗದ ಅವನತಿಯ ಸಂಧ್ಯಾಸಮಯವು

ಭಾಗ್ಯದ ಸುತ್ತು ಮುಗಿದು ಅವನತಿಯ ಕಾಲವು ಬಂದ ಸಂಧ್ಯಾ ಸಮಯದಲ್ಲಿ ಮೂರು ಪ್ರತಿಲೋಮ ಪ್ರವೃತ್ತಿಗಳು ಕಂಡು ಬಂದವು. ಒಂದು— ಬರಬರುತ್ತ, ಒಮ್ಮೆ ತುಂಬಿ ಹೊರಸೂಸುತ್ತಿದ್ದ ಪ್ರಾಣ ಬಲವು ಇಂಗಿ, ಬಾಳುಬೇಕು ಬದುಕುಬೇಕು, ಹುಟ್ಟಬೇಕು ಕಟ್ಟಬೇಕು ಎಂಬ ಹಿಗ್ಗೇ ಹೀರಿ ಹೋಯಿತು. ಈ ಅವನತಿಯ ಕಾಲದಲ್ಲಿಯೂ ಪ್ರಾಣಬಲವು ಇನ್ನೂ ವಿಸ್ಮಯಕಾರಕವೂ ಅಸಾಧಾರಣವೂ ಆಗಿದ್ದು ಇಂಗಿಯೇ ಹೋಯಿತೇನೋ ಎನ್ನುವಂತೆ ಈಷನ್ಮಾತ್ರವಾಗಿ ಪೂರ್ಣ ತಾಮುಕ್ಕಿಳಿಯುವದು. ಆದರೆ ಗತವೈಭವಮೊಡನೆ ಸರಿಹೋಲಿಸಿ ನೋಡಿದಲ್ಲಿ ಅವನತಿಯು ಹೆಚ್ಚು ಹೆಚ್ಚಾಗಿ ಸ್ಪಷ್ಟವಾಗುತ್ತ ಬಂದಿರುವ ದಾಗಿ ಕಾಣುವದು. ಎರಡನೆ ಸಂಗತಿಯೆಂದರೆ— ಪೂರ್ವದ ಬುದ್ಧಿ ಸ್ವಾತಂತ್ರ್ಯದ ಪ್ರವೃತ್ತಿಯು ವೇಗದಿಂದ ವಿರಾಮಹೊಂದಿ ಶಾಸ್ತ್ರೀಯ, ವಿಮರ್ಶಕ, ಹಾಗು ಪ್ರಾತಿಭ ಪ್ರಜ್ಞೆಗಳು ಗಾಢ ನಿದ್ರೆಯಲ್ಲಿ ಮಗ್ನ ವಾಗಿರುವವು. ಉಳಿದದ್ದೆಂದರೆ ಹಳೆಯ ಗಳಿಕೆಯ ಜ್ಞಾನದ ತುಣುಕು ಮಿಣುಕುಗಳನ್ನು ಯದ್ವಾತದ್ವಾ ರೀತಿಯಲ್ಲಿ ಪುನರುಚ್ಚಾರಣೆ ಮಾಡುವ ದಷ್ಟೆ. ಮಹಾ ಬುದ್ಧಿಶಾಲಿಗಳಾದ ಪುರಾತನರ ಭಗ್ನಾವಶೇಷ ರೂಪ ಗಳಲ್ಲಿ ಹಾಗು ಪದ್ಧತಿಗಳಲ್ಲಿ ಮನವೂ ಜೀವನವೂ ಜಡವಾಗಿ ಹೋದುವು. ಶಾಸ್ತ್ರಪ್ರಮಾಣವೂ ನಿಯಮಗಳೂ ಹೇಳಕೇಳುವರಿಲ್ಲದ ನಿರಂಕುಶ

ಪ್ರಭುಗಳಾಗಿ ಅವುಗಳ ನಿಜಾರ್ಥ ಭಾವಗಳ ಸ್ವಾರಸ್ಯ ಮಾಸಿಹೋಯಿತು. ಕೊನೆಗೆ— ಪಾರಮಾರ್ಥಿಕತೆಯೆಂಬೋ ಉಳಿದಿತ್ತಾದರೂ ಅದು ಧಗ ಧಗ ಬೆಳಗುವ ಜ್ಞಾನ ಜ್ಯೋತಿಯಾಗದೆ ಹಳೆಯ ಮಹೋನ್ನತ ಸಮನ್ವಯವನ್ನು ತಪ್ಪಿ, ಕೆಲವೊಂದು ಪಾರಮಾರ್ಥಿಕ ಸತ್ಯಗಳ ನಷ್ಟೆ ಒತ್ತಿ ಹೇಳಿ, ಉಳಿದವುಗಳನ್ನು ತಿರಸ್ಕರಿಸಿ, ಭಗ್ಗನೆ ಉರಿದೇಳುವ ಜ್ವಾಲೆಯಾಗಿ ಪರಿಣಮಿಸಿತು. ಈ ಅಲ್ಪತ್ವವು, ಮಾನವಜೀವನಗಳ ಸಂಪೂರ್ಣ ಪರಮಾರ್ಥೀಕರಣವನ್ನೆ ಗುರಿಯಾಗಿಟ್ಟುಕೊಂಡ ಭಾರತೀಯ ಸಂಸ್ಕೃತಿಯ ಮಹಾಸಾಹಸದೊಳಗಿನ ಅಪಜಯವೇ ಸರಿ. ಪ್ರಾರಂಭವೇನೋ ಅತ್ಯದ್ಭುತವಾಗಿತ್ತು; ಬೆಳವಣಿಗೆಯೂ ಮಹತ್ತರವಾಗಿತ್ತು; ಅದರ ಪ್ರಗತಿಯೂ, ಹೊಸಹೊಂದಿಕೆಯೂ, ನವಪುಷ್ಪ ಪ್ರಸವ ಕಾಲವೂ ಬರಬೇಕಾದ ಒಂದು ಸಂದು ಕಟ್ಟಿನಲ್ಲಿ ಪ್ರಾಚೀನ ಸಂಸ್ಕೃತಿಯು ಏಕೋ ಕುಂಟು ಬಿದ್ದು, ಹಿಂಜರಿದು, ಹಾದಿ ತಪ್ಪಿತು. ಪಾರಮಾರ್ಥಿಕ ತತ್ತ್ವಾಂಶವು ಇನ್ನೂ ಜನಾಂಗದ ಹೃದಯಗತವಾಗಿದ್ದುಕೊಂಡು ಅದರ ದರ್ಶನ ಸ್ಮೃತಿಗಳಲ್ಲಿಷ್ಟೆ ಅಲ್ಲದೆ ಆಚಾರಗಳಲ್ಲಿಯೂ ಇಣುಕುತ್ತಿದ್ದರೂ ಅದೆಲ್ಲವೂ ಹೊಗೆ ಮುಸುಕಿದ ಉರಿಯಂತೆ. ಅದರ ಅಂತರಂಗ ಬಹಿರಂಗ ಕಾರಣಗಳ ಮೀಮಾಂಸೆಯು ಅಗತ್ಯವಿಲ್ಲದಿದ್ದರೂ, ಇದ್ದ ಸಂಗತಿಯನ್ನೇನು ಅಲ್ಲಗಳೆಯುವಂತಿಲ್ಲ. ಅಭೂತಪೂರ್ವ ಸ್ಥಿತಿಯು ಇದಿರಾದಾಗ್ಗೆ ಭಾರತೀಯ ಚಿತ್ತವು ಕ್ಷಣಿಕವಾದ ಅಸಹಾಯ್ಯತೆಗೆ ಈಡಾಯಿತೆಂಬುದು ಸ್ಪಷ್ಟವಾಗಿದೆ.

## ಭಾರತದ ಹಾಗೂ ಐರೋಪರ ಜೀವನ ಸಂಸ್ಕೃತಿಗಳ ಸಂಘರ್ಷಣ—ಅದರಿಂದುಂಟಾದ ಪ್ರೇರಣೆಗಳು

ಈ ಸಂದು ಕಟ್ಟಿನಕಾಲಕ್ಕೇ ಐರೋಪಿನ ನೆರೆತೆರೆಗಳು ಹಿಂದುಸ್ಥಾನವನ್ನು ಬೀಸಿ ಉಡುಗಿದವು. ಈ ಹೊಸದಾದ ಮತ್ತು ತೀರ ವಿರುದ್ಧವಾದ ಸಂಸ್ಕೃತಿಯ ಹೊಯ್ಲಿನಿಂದ ಮೊದಲಿನೇಟಿಗೆ ಬಾಳಲ-

ಸಮರ್ಥವಾಗಿದ್ದ ಹಳೆಯದು ಹಾಳಾಯಿತು. ಉಳಿದಷ್ಟಿಷ್ಟೋ ಕರಗಿತು, ಇನ್ನುಳಿದದ್ದು ಕಳೆಗುಂದ ಹತ್ತಿತು. ಹೊಸ ಚಳವಳಿಯೊಂದು ಪ್ರಾರಂಭವಾದರೂ ಅದು ಪರಕೀಯ ಸಂಸ್ಕೃತಿಯ ಗೊಂದಲಗೆಟ್ಟ ಅನುಕರಣದ ಅಪದ್ಧ ರೀತಿಯುಳ್ಳದ್ದು. ಆಗ್ಗೆ ಬಂದಿತ್ತು ಸತ್ತ್ವಪರೀಕ್ಷೆಯ ಕಾಲ; ಜೀವವನ್ನು ಗಂಡಾಂತರಕ್ಕೀಡು ಮಾಡುವ ಅಗ್ನಿದಿವ್ಯದ ಹೊತ್ತು! ಒಂದು ಕಡೆಗೆ ಪರಕೀಯ ವಿದ್ಯಾಭ್ಯಾಸಗಳ ಹೀನ ದೀನಾನುಕರಣ, ಇನ್ನೊಂದು ಕಡೆಗೆ ಪೂರ್ವದ ರಕ್ತಗತ ಪ್ರವೃತ್ತಿಗಳ ಜೀವಹರಣದಿಂದಾದ ಜಾಡ್ಯ, ಹೀಗೆ ಇಮ್ಮಡಿ ಭಾರದಲ್ಲಿ ಇನ್ನೊಂದು ಕಡವು ಪ್ರಾಣ ಬಿಡದ ಜೀವವು ಸಿಕ್ಕಿದ್ದರೆ ಸುಗ್ಗಿ ಸುರಿಯಾಗಿ ನಷ್ಟವಾಗುತ್ತಿತ್ತು. ರಾಷ್ಟ್ರಗಳಿಗೂ ನಾಗರಿಕತೆಗಳಿಗೂ ಇಂಥ ಸಂಕಟ ಕಾಲವು ಎಷ್ಟು ವಿನಾಶಕಾರಕವೂ ಪ್ರಳಯಕಾರಿಯೂ ಆಗಬಹುದೆಂಬುದು ಇತಿಹಾಸದ ಅನೇಕ ಉದಾಹರಣೆಗಳಲ್ಲಿ ಕಂಡು ಬಂದಿವೆ. ಆದರೆ ಸುದೈವದಿಂದ, ಭಾರತದ ದೇಹದಲ್ಲಿ ಸುಪ್ತವಾಗಿದ್ದ ಪ್ರಾಣಶಕ್ತಿಯು ಕೆಲಹೊತ್ತು ಕುತ್ತಕ್ಕೀಡಾದರೂ ತೀರ ಸತ್ತಿರಲಿಲ್ಲ; ಕುತ್ತದ ಹೊಟ್ಟೆಯಲ್ಲಿಯೇ ಅದರ ಮದ್ದಿರುವಂತೆ ಅದೇ ಜಾಡ್ಯವನ್ನಳಿಸಿ ಪ್ರಾಣೋದ್ದೀಪಕವಾಯಿತು. ಐರೋಪ್ಯರ ಜೀವನ ಸಂಸ್ಕೃತಿಗಳ ಅಡ್ಡೇಟಿನಿಂದ ಕೆಲಕಾಲ ಸಂಹಾರವೂ, ಕೊಳೆತು ಹುಳಿತು ಹೋಗುವಿಕೆಯೂ ನಾಗಿದರೂ ಅದರ ಸಂಘರ್ಷಣದಿಂದಲೇ ಮೂರು ಅಗತ್ಯವಾದ ಪ್ರೇರಣೆಗಳುಂಟಾದವು. (೧) ನಿದ್ರಾಜಡವಾಗಿದ್ದ ಬೌದ್ಧಿಕ ಮತ್ತು ವಿಮರ್ಶಕ ವೃತ್ತಿಯನ್ನು ಅದು ಉಜ್ಜೀವಿಸಿತು; (೨) ಹೊಸ ಸೃಷ್ಟಿಯ ಇಚ್ಛೆಯನ್ನು ಹುಟ್ಟಿಸಿ ಜೀವನವನ್ನು ಯಥಾಪೂರ್ವಸ್ಥಿತಿಗೆ ತಂದಿತು; (೩) ಉಜ್ಜೀವಿತ ಭಾರತಶಕ್ತಿಯನ್ನು ಅಭಿನವಸ್ಥಿತಿ ಆದರ್ಶಗಳೆಡೆಗೆ ಮುಖಾಮುಖಿಯಾಗಿ ಎದುರುಗೊಳಿಸಿ ಅವುಗಳನ್ನು ತಿಳಿದು, ಸೈಗೂಡಿಸಿ, ಗೆದ್ದುಬಿಡುವ ಜಾಗೃತಿಯ ಅವಶ್ಯಕತೆಯನ್ನು ಮನಗಾಣಿಸಿತು. ರಾಷ್ಟ್ರದ ಚಿತ್ತವು ಚೇತರಿಸಿಕೊಂಡು ನವದೃಷ್ಟಿಕ್ಷೇಪದಿಂದ ಪೂರ್ವ ಸಂಸ್ಕೃ-

ತಿಯ ಅರ್ಥವನ್ನೂ ಲಕ್ಷ್ಯವನ್ನೂ ಕಂಡುಕೊಂಡು ಆಧುನಿಕ ಜ್ಞಾನ ಹಾಗು ಆದರ್ಶಗಳ ಅನುಬಂಧವಲ್ಲಿಯು ಹೊಂದಿಸಿ ಹೋಲಿಸಿ ನೋಡಿತು. ಈ ದರ್ಶನ ಪ್ರೇರಣೆಗಳಿಂದ ಜಾಗೃತವಾದ ಭಾರತವು ನವಜನ್ಮೋದಯವನ್ನಿದಿರು ನೋಡುತ್ತಿದೆ; ಮುಂದಿನ ವೃತ್ತಿಯ ಒಲವಿನ ರೂಪರೇಖೆಗಳು ಇದರಿಂದಲೇ ನಿರ್ಣೀತವಾಗಬೇಕು. ಪ್ರಾಚೀನ ಆಧ್ಯಾತ್ಮಿಕ ಜ್ಞಾನವನ್ನು ಮತ್ತು ಅನುಭವವನ್ನು ಅದರ ಗಾಢತೆ ವೈಭವ, ಪೂರ್ಣತೆಗಳೊಟ್ಟಿಗೆ ತಿಳಿದು ಕೊಳ್ಳುವದು ತೀರ ಅಗತ್ಯವಾದ ಮೊದಲನೇಯ ಕೆಲಸ; ಈ ಆಧ್ಯಾತ್ಮಿಕ ಜ್ಞಾನವನ್ನು ಹೊಸ ರೂಪಗಳ ತತ್ತ್ವಜ್ಞಾನ, ಪದಾರ್ಥವಿಜ್ಞಾನ, ಸಾಹಿತ್ಯ, ಕಲೆ, ವಿಮರ್ಶಕ ವಿಚಾರಗಳಲ್ಲಿ ಹರಿಯುವಂತೆ ಮಾಡುವದು ಎರಡನೇಯದು. ಮತ್ತು ಎಲ್ಲಕ್ಕೂ ಬಿಗಿಯಾದ ಮೂರನೆಯ ಕೆಲಸವೆಂದರೆ— ಭಾರತ ಶಕ್ತಿಯ ಜ್ಯೋತಿಯಲ್ಲಿ ಆಧುನಿಕ ಸಮಸ್ಯೆಗಳನ್ನು ತಿಕ್ಕಿ ತೂಗಿ ಪರಮಾರ್ಥ ಪ್ರಧಾನ ಸಮಾಜದ ಸಿದ್ಧಿಗೆ ಬೇಕಾದ ವಿಶಾಲತರ ಸಮನ್ವಯವನ್ನು ವ್ಯವಸ್ಥೆಗೊಳಿಸಲು ಪ್ರತ್ಯೇಕವಾದ ಹೊಸ ಹವಣಿಕೆಗೆ ಹುರಿಯಾಗುವದು. ಈ ಮೂರು ದಿಕ್ಕಿನಲ್ಲಿ ದೊರೆಯಬಹುದಾದ ಜಯದ ಮಾನದಲ್ಲಿಯು ಮಾನವ ಕುಟುಂಬದ ಭವಿತವ್ಯಕ್ಕೆ ಭಾರತದಿಂದ ಸಹಾಯವಾಗಬೇಕು.

## ಭಾರತೀಯರ ಪದ್ಧತಿಯು ಪಾಶ್ಚಿಮಾತ್ಯರ ಪದ್ಧತಿಯ ವಿರುದ್ಧವಾಗಿದೆ

ಬ್ರಹ್ಮವು ಸ್ವೈಜಸಿದ್ಧಿಗಳ ಪರಾತ್ಪರ ಪರಮಾವಧಿಯು; ನೈಜ ಸಿದ್ಧಿಗಳ ಪ್ರಕಾಶದಲ್ಲಿಯೆ ತನ್ನ ಸತ್ಯ ಪರಿಪೂರ್ಣತೆಗಳನ್ನು ಕಂಡುಕೊಂಡು ಬೆಳೆಯಲು ಪ್ರಾಣಜೀವನವು ಕೆಳ್ಪದಿಯ ಅಪರಾವಧಿಯಲ್ಲಿ ತನ್ನ ಅನಂತಪ್ರಪಂಚವನ್ನು ಹರುಹಲಿದೆ. ನಮ್ಮ ಬುದ್ಧಿ ಸಂಕಲ್ಪಶಕ್ತಿ, ನೈತಿಕ ಹಾಗು ರಸಿಕಆತ್ಮಗಳು ಎರಡಕ್ಕೂ ಮಧ್ಯಸ್ಥವಾಗಿರುವ ಪ್ರತಿಬಿಂಬಕಗಳಾದ ಕನ್ನಡಿಗಳಿದ್ದಂತೆ. ಜೀವನವನ್ನೆ ಅತಿಶಯಗೊಳಿಸಲು

ಎಷ್ಟು ಬೇಕೊ ಅಷ್ಟು ಆಗಲಿ, ಅಷ್ಟು ಆಗಲಿ, ಪರಮಶಕ್ತಿಗಳನ್ನು ಕೆಳಗೆಳೆದುಕೊಂಡು ಜೀವನವನ್ನು ಉದ್ದೀಪಿಸುವದೂ ಸಿಂಗರಿಸುವದೂ ಪಾಶ್ಚಿಮಾತ್ಯರ ಪದ್ಧತಿಯಾಗಿದೆ. ಆದೇ ಭಾರತೀಯರ ಪದ್ಧತಿಯು ತದ್ವಿರುದ್ಧವಾಗಿದೆ. ಆ ಪದ್ಧತಿಯಲ್ಲಿ, ಅಂತರಾತ್ಮವನ್ನು ಕಂಡುಹಿಡಿದು, ಪರಾಶಕ್ತಿಗಳ ನಿಗೂಢ ಸತ್ತ್ವಸಾರವನ್ನು ಪಡೆದು ಪ್ರಾಣಜೀವನವನ್ನು ಆಳಿ, ಆಳುಮಾಡಿಕೊಂಡು ಅದನ್ನು ಆತ್ಮಕ್ಕೆ ಉತ್ತರವಾದಿಯಾದ ಮುಖವನ್ನುಮಾಡಿ ಪ್ರಾಣಶಕ್ತಿಯನ್ನು ಬೆಳೆಸುವದುಂಟು. ಬುದ್ಧಿ, ಇಚ್ಛೆ, ಹಾಗು ನೈತಿಕ, ರಸ್ಯೈಕ, ಭಾವನಾಮಯ ಜೀವನದ ಶಕ್ತಿಗಳು ಮನೋರಾಜ್ಯದಲ್ಲಿ ಸಾಮಾನ್ಯವಾಗಿ ಹೊಂದಬಹುದಾದ ಪರಿಪಾಕವನ್ನು ಅದು ಹೆವಕ್ಕೆ ತಂದು ತಂದು ನೋಡುವ ಒಲವಿನ-ದಾಗಿರುವದಲ್ಲದೆ, ಅವುಗಳ ಅಂತರ್ಗತಜ್ಞಾನ ಸಾಮರ್ಥ್ಯ ಹಾಗು ಜ್ಯೋತಿಗಳು ವೃದ್ಧಿಗೊಳುವಂತೆ ಆ ಶಕ್ತಿಗಳನ್ನೂ ಹೆಚ್ಚಿನ ಉನ್ನತಿ-ಗೆತ್ತುವದು. ಈ ಸತ್ತ್ವ, ಜೀವನದ ಈ ಉನ್ನತತರದೃಷ್ಟಿ, ಘನ-ತರ ಶಕ್ತಿಗಳ ಉದಯವು ಸಂಭಾವ್ಯವೆಂಬರ್ಥ, ಮತ್ತೆ ಈ ಭಾರತ ನವಜನ್ಮದ ಕಾಲಕ್ಕೆ ಪುನಃಸೃಷ್ಟಿ ನಿರ್ಮಾಣ ಕಾರ್ಯವನ್ನೂ ಪ್ರಸಂಗ ವಶಾತ್ ಇಂದಿನ ಪ್ರಪಂಚವನ್ನೇ ಗೆದ್ದು ಆಳುವ ಪರಾಕ್ರಮವನ್ನೂ ಮಾಡಬೇಕು. ಆದರೆ ಈ ತತ್ತ್ವಾರ್ಥದ ಎಚ್ಚರಿಕೆಯು ಭಾರತಕ್ಕೆ ಇನ್ನೂ ಅಸ್ಪಷ್ಟವಾಗಿದೆ. ಹಿಂದುಸ್ಥಾನದೊಳಗಿನ ಕಾರ್ಯ ಸಮುದಾಯವು ಈ ಕ್ಷಣಕ್ಕೂ ಇರೋಪಿನವರ ಅಚ್ಚಿನಲ್ಲಿ ಅವರ ಪ್ರವರ್ತನೆ ಪರಿಪಾಟಿಗಳನ್ನೇ ಅನುಸರಿಸಿ ಸಾಗಿದೆ; ಆದರೆ ನಮ್ಮೊಳಗಿನ ಅಂತಃಸತ್ತ್ವಕ್ಕೂ ಇದೆಲ್ಲ ಪರಕೀಯವೆನಿಸುವದರಿಂದ ಕೃತಿಯಲ್ಲಿ ಇಚ್ಛಾಬಲವಿಲ್ಲ, ರೀತಿಯಲ್ಲಿ ಗಡಸುತನವಿಲ್ಲ, ಪರಿಣಾಮದಲ್ಲಿ ಪ್ರಯೋಜನಕಾರಿತ್ವವಿಲ್ಲ; ಯಾಕೆಂದರೆ ಇವಾವವೂ ನಮ್ಮ ಜೀವದ ತಾಯ್ಬೇರಿನಿಂದ ರಸವೇರಿ ಹುಟ್ಟಿ ಬಂದುವೇ ಅಲ್ಲ. ಕೆಲಕೆಲವು ಕಡೆಗೆ ಆತ್ಮಪರಿಜ್ಞಾನದ ನಸುಕು

ಹರಿದ ಬೆಳಕು ಬಿದ್ದಿದೆ. ಇನ್ನೂ ಚನ್ನಾಗಿ ಬೆಳಗಾಗಿ ಸುತ್ತೂ ಪಸರಿಸಿದ ಮೇಲೆ ಭಾರತದೊಳಗಿನ ನವಜನ್ಮವನ್ನು ಕುರಿತು ಬರಿ ಪ್ರತ್ಯಾಶೆಯಿಂದಲ್ಲ ಆದರೆ ವಸ್ತುಸ್ಥಿತಿಯಿಂದು ಮಾತನಾಡಬಲ್ಲೆವು.



# ಎರಡನೆಯ ಪ್ರಕರಣ.

**ನವಜಾಗೃತಿಯ ಮೂರು ಮುಖಗಳು**

ಇನ್ನೇನೋ ಭಾರತೀಯ ನವಜನ್ಮವು ಕಟ್ಟಿಟ್ಟದ್ದೆನಿಸಬಹುದು. ಆದರೆ ಇಲ್ಲಿಯ ವರೆಗೆ ಅದರ ಸಾಗುವಣೆ ಹೇಗಾಯಿತು? ಆ ಘಟನಾವಳಿಗಳ ಇತಿಹಾಸ ಕ್ರಮವಾವುದು? ವಿಚಾರ ಘಟಕಗಳ ಅನುಕ್ರಮ ಸರಣಿ ಎಂತಹದು? ಎಂಬುದನ್ನು ವಿಂಗಡಿಸಿ ನೋಡಿದರೆ ಈ ಬದಲಾವಣೆಯು ಮೂರು ಮೆಟ್ಟಲುಗಳಿಂದಾದುದಾಗಿ ಕಂಡು ಬರುವದು. ಬದಲಾವಣೆಯಲ್ಲಿ ಎಲ್ಲಿಯೂ ಬಹುಮುಖವಾದ ಬಿರುಕು ಮುರುಕು; ಮತ್ತೆ ಕೈಯಾಡಿಸುವದು, ಕಟ್ಟುವದು; ಕೊನೆಗೆ ಕಟ್ಟಡ ದಿಟ್ಟಣ, ಕಳಸ— ಹೀಗಿರತಕ್ಕದ್ದೆ. ಹಳೆಯ ಸಂಸ್ಕೃತಿಯು ಹೊಸ ಕಾಲಕ್ಕನುಸರಿಸಿ, ಹೊಂದಿದ ಮಾರ್ಪಾಟದೊಂದು. ಸತ್ತೊಂದು ಸಂಸ್ಕೃತಿಯ ತೊಡೆಯ ಮೇಲೆ ಕೂಡಿಸಿದ ಹೊಸ ಹುಟ್ಟಿದ ನಾಗರೀಕತೆಯ ದತ್ತವಿಧಾನದಂತಲ್ಲ; ಜೀರ್ಣದೇಹ ಬಿಟ್ಟು ಹೊಸಮೈವೆತ್ತಂತೆ; ನಿಜವಾದ ಪುನರ್ಜನ್ಮ. ಇದರ ಅಸ್ತಿವಾರವೇನೋ ಮೊದಲೇ ಅಲ್ಲಲ್ಲಿ ಹಾಕಿದ್ದಿರಬಹುದು. ಆದರೂ ಇದರ **ಮೊದಲುಮೆಟ್ಟಲೆಂದರೆ** ಐರೋಪ್ಯರ ಸ್ವಾಗತ ಸಂಪರ್ಕಗಳಿಂದ ಹಳೆಯ ಸಂಸ್ಕೃತಿಯ ತತ್ತ್ವಗಳಿಗೇ ಸಂಚಕಾರ ಬಿದ್ದು, ಮಹತ್ತ್ವದ ಮೂಲ ಮಾತುಗಳು ಪುನರ್ವಿಚಾರಣೆಗೆ ಗುರಿಯಾದದ್ದು ಅಹುದು. **ಎರಡನೆಯ ಅವಸ್ಥೆಯಲ್ಲಿ** ಭಾರತ ಶಕ್ತಿಯು ಐರೋಪ್ಯ ಪ್ರಭಾವವನ್ನೆದುರಿಸಿ ಅದು ಕೊಡಲು ಬಂದುದನ್ನು ಪುಟ್ಟಿಪೂರ ಅಲ್ಲಗಳೆದು, ಸನಾತನ ಧರ್ಮದ ರಸವಷ್ಟೇ ಅಲ್ಲ, ಚಾಚೂ ಬಿಡದೆ ಕಸಕಡ್ಡಿ ಕೂಡ ತನ್ನ ಜೀವಜೀವಾಳವೆಂದೆತ್ತಿಹಿಡಿದರೂ, ಕದ್ದುಮುಚ್ಚಿ ಒಳಗಿಂದೊಳಗೆ ಹೊಸದನ್ನು ಮೈಯುಣ್ಣಿಸಿಕೊಳ್ಳುವದು ಸಾಗಿತು.

**ಮೂರನೇಯದು** ಇದೀಗ ಆರಂಭವಾಗಿದೆ; ಅಥವಾ ಮೊನ್ನೆ ಮೊನ್ನೆ ಆರಂಭವಾಗಿದೆ ಎನ್ನೋಣ. ಇದೊಂದು ನವಸೃಷ್ಟಿಯ ಉಪಕ್ರಮವೇ ಎನ್ನಬಹುದು. ಇದರಲ್ಲಿ, ಭಾರತೀಯ ಮನದ ಪರಮಾರ್ಥ ಪ್ರವಣ-ತೆಯು ಪರಮ ಪ್ರತಿಷ್ಠಿತವಾಗಿಯೇ ಉಳಿಯುವದು; ಕಳೆದ ತತ್ತ್ವಗಳನ್ನು ಮತ್ತೆ ಗಳಿಸಿ, ನವೀನ ರೂಪಭಾವನೆಗಳಲ್ಲಿ ಹುರುಳು ತಿರುಳುಳ್ಳದ್ದನ್ನು ಸ್ವೀಕರಿಸಿ ಇದು ಸಾಗುವದಾದರೂ ಎಲ್ಲವರ ರೂಪಕ್ರಾಂತಿಮಾಡಿ ಭಾರ ತದ ಮುದ್ರೆಯೊತ್ತಿ, ಮೈಗೂಡಿಸಿ ಪರಿಣಾಮಾಂತರಕ್ಕೆ ತಂದು, ಅವು ಪರಕೀಯವೆಂಬ ಕಳೆಯನ್ನೇ ಕಳೆದು, ಭಾರತದಾದಿ ಶಕ್ತಿಯೇ ನೂತನ ಪ್ರಭಾವಕ್ಕೆ ಆಳಾಗದೆ, ಇಂಬುಗೊಡದೆ, ಅದನ್ನು ಹಿಡಿದು ಕೈವಾಡಿಗೆ ತಂದ ತನ್ನ ವಿಲಕ್ಷಣ ಕಾರ್ಯವಿಧಾನದ ಜೋಡೊಂದು ಸಮಂಜಸ ಭಾವವೇ ಇದು ಎಂಬಂತೆ ಮಾಡಿಬಿಡುವದು.

**ಜಪಾನ ಹಾಗೂ ಹಿಂದುಸ್ಥಾನ ಇವುಗಳ ಬೆಳವಣಿಗೆಯ ಭೇದಗಳು**

ಮನುಷ್ಯರೊಡನಾಗಲಿ, ಪದಾರ್ಥಗಳೊಡನಾಗಲಿ ಪ್ರಕೃತಿದೇವಿ ಯಿಟ್ಟ ವ್ಯವಹರಣೆಯು ಅನೇಕ ಪ್ರಕಾರಾಂತರಗಳಲ್ಲಿ ಒಂದೂ ಕೂಡ ಆಕಸ್ಮಾತ್ತಾಗಲಿ, ಕಾಕತಾಲೀಯವೆಂದಾಗಲಿ, ದೊರಸಪಗಳಿಗೆ ಶರ ಣಾಗಿಯಾಗಲಿ, ಘಟಿಸಲರಿಯದು. ಪದಾರ್ಥಗಳ ಅಂತರಂಗವೇ ಅವು ಗಳ ಪರಾಕಾಷ್ಠೆಯ ಪಲ್ಲಟದಲ್ಲಿಯೂ ಹಾದಿ ಕೊರೆದು ಕೊಡುವದು; ಅಂತೆಯೇ ಈ ಬುನಾದಿಯ ಭಾರತದ ಅಂತಃಸತ್ತ್ವವು ಇದ್ದದ್ದೇ ಇರುವದಾದರೂ ಈಗಿನ ಅತಿ ಸಂಕೀರ್ಣವಾದ ಸಂಕ್ರಮಣವೂ ಅನಿ-ವಾರ್ಯವಾಗಿಯೇ ಅದರ ಪ್ರಾರಬ್ಧದಲ್ಲಿಯೊಂದಾಗಿತ್ತು ಎಂದು ಹೇಳ ಬೇಕಾಗುವದು. ಪಾಶ್ಚಿಮಾತ್ಯರ ಆಚಾರೋದ್ದೇಶಗಳ ಅಖಂಡ ಭಾರವನ್ನು ಹಾಗೂ ಹೀಗೂ ಒತ್ತಿಸಿಕೊಂಡು, ತನ್ನ ಪೂರ್ವದ ಪ್ರಧಾ ನೋದ್ದೇಶಗಳನ್ನು ಬದಿಗೊತ್ತಿ, ಬಂದ ಬದಲಾವಣೆಗೆ ಇಂಬುಗೊಟ್ಟು ಸಂಧಿಯೊಳಗೆ ಸಮಾರಾಧನೆ ಮಾಡಿಕೊಳ್ಳುವ ಸಂಭವವೇ ಇರಲಿಲ್ಲ.

ಹೊರಗಿನ ಪ್ರಸಂಗ ಪರಿಸ್ಥಿತಿಗಳು ಜಪಾನಿನಷ್ಟೇ ಅನುಕೂಲವಿದ್ದ ಪಕ್ಷಕ್ಕೂ ಭಾರತವು ನವೀಕೃತ ಅಭಿನವ ಜಪಾನಿನಂತೆ ಚಟಪಟ ಪರಿವರ್ತನದ ದೃಶ್ಯಕ್ಕೆ ಸಿದ್ಧವಾದೀತೆಂಬುದು ಸಲ್ಲದ ಮಾತು. ಜಪಾನಿನ ಜೀವವು ಅದರ ಸಿದ್ಧ ರಸಿಕತೆಯಲ್ಲಿಯೂ,ದೈನಂದಿನದ ಸ್ವಭಾವದಲ್ಲಿಯೂ ಕೇಂದ್ರಿತವಾಗಿದೆ; ಎಂದಿಗೂ ಅದು ತಿಂದದ್ದನ್ನು ಗಪಗಪ ಜೀರ್ಣಿಸಿಕೊಂಡಿದೆ. ಅದರ ಆತ್ಮಕ್ಕೆ ಧಕ್ಕೆ ತಗಲದಂತೆ ಕಾಯಲು ಸಾಕಾಗುವ ಸಾಮರ್ಥ್ಯವೂ, ಅದರ ರಾಷ್ಟ್ರಲಕ್ಷಣವನ್ನೂ ಕಲಾದೃಷ್ಟಿಯನ್ನೂ ಸುರಕ್ಷಿತವಾಗಿರಿಸುವ ಶಕ್ತಿಯೂ ಅದರ ಬಲಿಷ್ಠವಾದ ಸ್ವಾಭಾವಿಕ ಜಿಗುಟುತನದಲ್ಲಿದೆ. ಭಾರತದ ಮಾತು ಹಾಗಲ್ಲ; ಅದರ ಜೀವವು ಅದರ ಆತ್ಮದಲ್ಲಿ. ಬಂದಂತೆ ಬಣ್ಣ ತಿರುಹಿ ಹೊಂದಿಸಿಕೊಳ್ಳುವ ಚುರುಕು ಚಪಲತೆಗಳು ಅದಕ್ಕಿಲ್ಲ; ಮಹತ್ತರವಾದ, ಆತ್ಯಂತಿಕ, ಘನಗಹನ ಧ್ಯಾನ ಮಗ್ನ ಗಾಢತೆಯದಕ್ಕಿದೆ. ಅದು ವಿಚಾರ ಮಾಡದೆ ಹೆಜ್ಜೆ ಹಾಕದು; ಅಂತೆಯೇ ಅನಿಶ್ಚಯ ಸಾವಕಾಶಗಳು. ತನ್ನ ತೀರ ಹೊರವೈಯನ್ನೂ ತಿದ್ದುವದಿರಲಿ, ಬೇರೆ ಅಚ್ಚಿಗಿಳಿಸುವದಿರಲಿ, ಅಂತರ್ಯದಂತರಾಳದ ಆಳದಲ್ಲಿ ಅದು ಎಣಿಕೆ ಹಾಕುವದು. ಧ್ಯಾನವು ತೀರಿ, ಸಮಾಧಿಯಿಳಿದು, ಎರಕದ ಮೂಸೆ ಸಿದ್ಧವಾಗುವ ವರೆಗೂ ಅದು ಹೊಸ ಹಾದಿಯಲ್ಲಿ ಹಗುರು ಹೆಜ್ಜೆಯನ್ನಿಕ್ಕದು. ಈ ವಿಚಿತ್ರ ಗತಿಯ ಜಟಿಲತೆಯಿಂದಲೇ ಎಲ್ಲ ಪ್ರಶ್ನೆಗಳು ಗಡುಚಾಗುವವು; ಅಂತೆಯೇ ಅಭಿಪ್ರಾಯಗಳ ಹುಚ್ಚು ಸಂತೆ ನೆರೆಯುವದು; ನಿಶ್ಚಿತವಾದ ಬೆಳವಣಿಗೆಗೆ ಪ್ರತಿಕೂಲವಾಗಿ ದೃಷ್ಟಿ ಭೇದಗಳು, ವೃತ್ತಿ ಭೇದಗಳೂ ತಲೆಯೆತ್ತುವವು. ಅದಕ್ಕಾಗಿಯೇ ಎಲ್ಲ ಪ್ರಗತಿಯು ಗೊಂದಲದೊತ್ತಾಯದಿಂದ ಸಾಗಿದಂತೆ ಕಾಣುವದು; ಅಥವಾ ಗಾಳಿಗೊಮ್ಮೆ ಲಹರಿಯೆದ್ದಂತೆ ಭರತ ಇಳಿತದ ತೂಗಾಟದಲ್ಲಿ ದಿಕ್ಕುಗಾಣದವರಂತೆ ಹಾದಿಸಾಗುವದು. ಆದರೆ ಒಮ್ಮೆ ಒಳಹಿಡಿತ ಸಿಕ್ಕು ರೀತಿ ನೀತಿ ನಿಚ್ಚಳವಾಗಿ ಮೂಡಿ ಬರುವದೊಂದೇ ತಡ, ಆ ಮೇಲೆ ಪಾಶ್ಚಿಮಾತ್ಯ ಅಭಿನವತೆಯೇ ಏಸಿಯಾ-ಖಂಡದ ಉಡುಪು ತೊಡುಪು ಇಟ್ಟುಕೊಂಡು

ಬಂದಂತಾಗವೆ, ಮಾನವ ನಾಗರೀಕತೆಯ ಭವಿಷ್ಯಕ್ಕೆ ಮೇಲ್ತರಗತಿಯ ದೆನಿಸಿ, ಬೇಕಾದ ಮಹೋನ್ನತ ಸ್ವಯಂಭು ಸೃಷ್ಟಿಯೊಂದು ಬರುವದು ತ್ರಿವಾರ ಖಂಡಿತವಾದ ಮಾತು .

## ಜಾಗೃತಿಯ ಮೊದಲ ಮುಖ; ಪಾಶ್ಚಾತ್ಯರ ಅನುಕರಣ

ಹಿಂದುಸ್ಥಾನದಲ್ಲಿ, ಪಾಶ್ಚಿಮಾತ್ಯ ಶಿಕ್ಷಣವನ್ನು ಮೊದಲು ಪಡೆದು ಬುದ್ಧಿವಂತರೆನಿಸಿಕೊಂಡ ತಲೆಮಾರಿನ ಕೆಲಕೆಲವು ಜನರು ಎಷ್ಟೇ ಶಕ್ತಿವಂತರಾಗಿ ಹೊಸ ಕೆಲಸ ಹೂಡುವ ಹುಮ್ಮಸವುಳ್ಳವರಾದಾಗ್ಯೂ ಮೇಲ್ಕಾಣಿಸಿದ ಕಲ್ಪನೆಯು ಅವರದಾಗಿರಲಿಲ್ಲ. ಕೆಲದಿನದ ಮೇಲೆ ಜಪಾನಿನಲ್ಲಿ ವಿಸ್ಮಯಕಾರಕವಾದ ವೇಗದಿಂದಾದ ಅವಸ್ಥಾಂತರದಂತೆ ತಮ್ಮಲ್ಲಿಯೂ ಆದೀತೆಂಬ ಆಸಿವಸಿಯ ಆಸೆಯವರದಾಗಿತ್ತು. ಆತ್ಮ-ಪ್ರಾಣ-ಚಿತ್ತ ಮೊದಲು ಮಾಡಿಕೊಂಡು ಬುಡದಿಂದ ಇಡಿಯಾಗಿ ಅಭಿನವೀಕೃತವಾದ ನವಭಾರತಕ್ಕೆ ಅವರ ಪ್ರತ್ಯಾಸೆಯು ಸ್ವಾಗತವನ್ನು ಬಯಸಿತ್ತು. ಅವರು ಉದ್ದೇಶದಲ್ಲಿ ಜಾಜ್ವಲ್ಯ ದೇಶಾಭಿಮಾನಿಗಳಾಗಿದ್ದರೂ ಅವರ ಚಿತ್ತವೃತ್ತಿಯು ಅರಾಷ್ಟ್ರೀಯವಾಗಿತ್ತು. ನಮ್ಮ ಪ್ರಾಚೀನ ಸಂಸ್ಕೃತಿಯು ಅರ್ಧಮರ್ಧ ಸುಸಂಸ್ಕೃತವೆಂಬ ಪಾಶ್ಚಾತ್ಯರ ಮತವನ್ನು ಅವರು ಸ್ಪಷ್ಟಾಭಿಪ್ರಾಯದಲ್ಲಲ್ಲದಿದ್ದರೂ ವ್ಯವಹಾರತಃ ಒಪ್ಪಿಕೊಂಡಿದ್ದರು. ಅವರನ್ನಾಳುವ ಆದರ್ಶಗಳು ಪಡುವಣದವರ ಕೈಗಡ ಬದುಕು, ಅಥವಾ ಏನಿಲ್ಲೆಂದರೂ ಅವರ ಸತ್ತ್ವ ತತ್ತ್ವಗಳನ್ನೊಳಕೊಂಡ ಶಿಕ್ಷಣ ಪ್ರಭಾವದಿಂದ ಪ್ರೇರಿತವಾದವುಗಳಾಗಿದ್ದವು. ಭಾರತದ ಮಧ್ಯಯುಗವು ಸೃಷ್ಟಿಸಿದುದೆಲ್ಲವನ್ನೂ ಅವರು ಹಾಳಾಗಲೆಂದು ತಿರಸ್ಕರಿಸಿ ಮೂಗು ಮುರಿದು ಅದರ ಸಂಗಬೇಡೆಂದು ಸಿಡಿದು ನಿಂತಿದ್ದರು. ಅದರಿಂದೇನೇ ಸ್ವೀಕರಿಸಿದರೂ ಅದೆಲ್ಲ ಔಪಚಾರಿಕ ಅಲಂಕಾರಕ್ಕೆ; ಹಳೆಯ ಪಾವಡವನ್ನು ಹೊಸ ತಲೆಗೆ ಸುತ್ತಿದಂತೆ; ಹಳೆಯ ಶಬ್ದಕ್ಕೆ ಹೊಸ ಅರ್ಥ-ವನ್ನು ಹೊಂದಿಸಿದಂತೆ. ಅದೇ, ಪ್ರಾಚೀನ ಭಾರತದ ಕೆಲಮಾತಿನ ಬಗ್ಗೆ-

ಯಾದರೂ ಅವರಿಗೆ ಅಭಿಮಾನವೆನಿಸುತ್ತಿತ್ತು. ಆದರೂ ಅವರಿಗೆ ಅದರ ಮೂಲಾರ್ಥ ಸ್ವಾರಸ್ಯವು ಹಿಡಿಸದೆ ಹೋಗಿ ತಮ್ಮ ಪಶ್ಚಿಮನತ-ಬುದ್ಧಿವಾದಕ್ಕೆ ಸರಿ ಹೋಗದ ಎಲ್ಲವನ್ನೂ ದಬ್ಬಲಿಕ್ಕೆ ಯತ್ನಿಸುತ್ತಿದ್ದರು. ಜಳಜಳ ತರ್ಕಕ್ಕೆ ಸರಳವೆನಿಸುವ ಮತಧರ್ಮವು, ಇಂಗ್ಲೀಷು ಅಚ್ಚಿನ ಪಡಿಯಚ್ಚುಗಳಾದ ಸಾಹಿತ್ಯ ಪ್ರಕಾರ, ವಿಚಾರ, ಸತ್ತ್ವಗಳು (ಉಳಿದ ಕಲೆಗಳ ಬೆಲೆಗಂತೂ ನೆಲೆಯೇ ದೊರತಿರಲಿಲ್ಲ) ಹತ್ತೊಂಬತ್ತನೆಯ ಶತಮಾನ ಮಧ್ಯದ ಇಂಗ್ಲಂಡಿನ ಮಧ್ಯಮ ವರ್ಗದವರ ಶೋಕಿಯ ಪ್ರಜಾಮತದ ಸಾಕ್ಷಾತ್ ಅನುಕರಣವೋ, ತದಾಕಾರವೋ ಆದ ರಾಜ ಕಾರಣವು— ಇವುಗಳನ್ನು ನೆಚ್ಚಿನಂಬಿ ನಡೆದರೆ ಸಾಕು. ಐರೋಪ್ಯ ರೀತಿಯ ಸಾಮಾಜಿಕ ಕಲ್ಪನೆಗಳೂ ಲಕ್ಷಣಗಳೂ ಸೂಸಿ ಸೋಸಿ ಬಂದು ಭಾರತ ಸಮಾಜವನ್ನೇ ಅಲ್ಲಟ ಪಲ್ಲಟಗೊಳಿಸಿ ಬಿಡುವದೆಂದು ಅವರ ತಿಳು ವಳಿಕೆಯಾಗಿತ್ತು. ಇಂಥ ತವಕದ ಮನವರಿಕೆಯಿಂದ ಗ್ರಹಿಸಿದ ಸಂಗ ತಿಗಳ ಬೆಲೆಯು ಮುಂದೇನೇ ಇರಬಹುದಾದರೂ ಅವರ ಪದ್ಧತಿಯು ಮಾತ್ರ ಅಪದ್ಧವಾಗಿತ್ತೆಂದು ಇಂದು ನಾವು ಕಂಡಿದ್ದೇವೆ. ಆಂಗ್ಲ-ಮಯ ಭಾರತವು ಸಾಧ್ಯವೂ ಅಲ್ಲ, ಈಪ್ಸಿತವೂ ಅಲ್ಲ. ಅವರ ಹಾದಿ ಯನ್ನು ನಾವು ಹಿಡಿದಿದ್ದರೆ ತಿಣಕಿ ಅಣಕಿಸುವ ಕೋಡಂಗಿಗಳಾಗಿ ಅಡ್ಡ ತಿಡ್ಡ ಅನುಯಾಯಿಗಳಂತೆ, ಐರೋಪ್ಯರು ಎಡವಿದಲ್ಲಿ ಎಡವಿ, ಕುಂಟಿದಲ್ಲಿ ಕುಂಟಿ, ಬಿದ್ದಲ್ಲಿ ಬಿದ್ದು, ತಡವರಿಸಿ, ಮುಗ್ಗರಿಸಿ, ಅವರಿಗಿಂತ ಯಾವಾಗಲೂ ಉತ್ಕ್ರಾಂತಿ ಪಥದಲ್ಲಿ ಅದು ನಮ್ಮನ್ನು ಅರ್ಧ ಶತಮಾನ ಹಿಂದೆಯುಳಿಸುತ್ತಿತ್ತು. ಈ ವಿಚಾರಾಂದೋಲನವು ಬಾಳಲೂ ಇಲ್ಲ, ತಾಳುವಂತಿರಲೂ ಇಲ್ಲ. ಅದರ ಅವಶೇಷವು ಅಲ್ಲಿಲ್ಲಿ ಮಿಸುಕಾಡಿದರೂ ಅದರ ಚೂಪಳಿದು ಹೋಗಿ ಚೈತನ್ಯವೇರದೆ ಸದ್ದ ಡಗುವ ಹಾದಿ ಹಿಡಿದಿದೆ.

## ಪಾಶ್ಚಾತ್ಯವಿಚಾರ ಪ್ರವಾಹದಿಂದ ನಮ್ಮವರಿಗೆ ಬಂದ ನೂತನದೃಷ್ಟಿ

ಹೀಗಿದ್ದರೂ, ಸಬಲವಾದ ನವಜನ್ಮಕ್ಕೆ ಅತ್ಯಗತ್ಯವಾದ ಹಾಗು ಯೋಗ್ಯತೆಯುಳ್ಳ ಪರಿಣಾಮಗಳು ಈ ಪ್ರಾರಂಭ ಕಾಲದ ಅಡ್ಡದಿಡ್ಡಿ ಸ್ವೀಕಾರದಿಂದಲೂ ಆದವು. ಮಹತ್ತ್ವದ ಪ್ರಥಮ ಶ್ರೇಣಿಗೆ ಸೇರ ಬಹುದಾದ ಮೂರು ಪರಿಣಾಮಗಳನ್ನು ನಾವು ಪ್ರತ್ಯೇಕಿಸಿ ತೋರಿಸ ಬಹುದು. ತಾರ್ಕಿಕ ಬುದ್ಧಿಯ ಅನಿರ್ಬಂಧ ಪ್ರವೃತ್ತಿಯನ್ನು ಅದು ಜಾಗೃತ ಗೊಳಿಸಿತು. ಮೊದಮೊದಲು ಅದೆಷ್ಟೇ ಸಂಕುಚಿತ ಸೀಮೆಯ-ಲ್ಲಿದ್ದು, ವಿಚಾರದಲ್ಲಿ ಪರೋಪ ಜೀವಿಯಾಗಿ ಕಂಡರೂ ಈಗೀಗ ಮಾನವ ಮತ್ತು ರಾಷ್ಟ್ರೀಯ ಹಿತದ ಎಲ್ಲ ವಿಷಯಗಳ ಬಗ್ಗೆಯೂ ಅದರ ಸಂಚಾರ ನಡೆದು, ನವೋನವ ಉತ್ಸುಕತೆಯಿಂದಲೂ ವರ್ಧಿಷ್ಣುವಾದ ಸ್ವಯಂ ಪ್ರಜ್ಞೆಯಿಂದಲೂ ಆ ಬುದ್ಧಿ ಪ್ರಯೋಗವು ಆಗುತ್ತಲಿದೆ. ಇದರಿಂದ ಭಾರತೀಯ ಚಿತ್ತದ ಅವಿಶ್ರಾಂತ ಜಿಜ್ಞಾಸಾ ವೃತ್ತಿಯು ಮರಳಿ ಚೇತರಿಸಿ, ಅದರ ಕ್ರಿಯಾ ಶಕ್ತಿಯ ಹದವಾದ ನಯವೂ, ಪ್ರಗಾಢತೆಯೂ, ಅದರ ದೃಷ್ಟಿಪಥದ ಅಪಾರತೆಯೂ ಬೇಗನೆ ಯಥಾ ಸ್ಥಿತಿಗೆ ಮುಟ್ಟಲೇಬೇಕು. ಚಿತ್ತದ ವಿಮರ್ಶಕ ಗುಣಕ್ಕೆ ಪೂರ್ಣವಾದ ಆಸ್ಪದವು ದೊರೆತಂತಾಗಿ, ಹಿಂದಿನ ಕಾಲಕ್ಕೆ ನಿರ್ದಿಷ್ಟ ಮರ್ಯಾದೆ ಯಲ್ಲಿ ಕೆಲವೊಬ್ಬರಿಂದಲೇ ಆಚರಣೆಗೆ ತಂದ ನಿಃಶೇಷ ಅವಲೋಕನವೂ ವಿಮುಕ್ತ ವಿವೇಕವೂ ಇಂದು ಎಲ್ಲರಿಗೂ ಬುದ್ಧಿಯ ಅವಶ್ಯ ಸನ್ನಾಹ ವಾಗಿವೆ. ಅನುಕರಣ ಯುಗದಲ್ಲಿ ಇದರ ಬೆಳೆ ಬಹಳ ಬರದಿದ್ದರೂ ಈಗ ಅದಕ್ಕೆ ಬಿಡುತ್ತಿರುವ ವಿಪುಲ ಫಲ ಭಾರವು ಆಗ ಬಿದ್ದ ಬೀಜದ ಫಲವೇ ಸರಿ. ಎರಡನೆಯ ಪರಿಣಾಮವೆಂದರೆ:—ಹಳೆಯ ಸಂಸ್ಕೃತಿಗೆ ಹೊಸ ವಿಚಾರಗಳ ಹೆಪ್ಪು ಹಾಕಿ ಅದಕ್ಕೊಂದು ಅದು ಗಟ್ಟಿತನವನ್ನು ತಂದಿತು. ಪೂರ್ವದಿಂದಲೂ ನಿಶ್ಚಿತವಾಗಿ ಬಿಟ್ಟಸಾಂಪ್ರದಾಯಗಳಿಂದಲೇ ಕೇವಲವಾಗಿ ಸಾಗಿದ್ದರೆ ನಮ್ಮ ಲೆಕ್ಕವೇ ಬೇರೆ, ನಮ್ಮ ವ್ಯವಹರಣೆಯೇ

ಬೇರೆ ಆಗಿರುತ್ತಿತ್ತು. ನಮಗೆ ಅಭ್ಯಾಸವಾಗಿ ಬಂದ ದೃಷ್ಟಿಯಲ್ಲಿ, ಕ್ಷಣಿಕವಿದ್ದರೂ ಭಯಂಕರವಾದ ಭಂಗವುಂಟಾಗಿದ್ದರಿಂದಲೇ ಈಗ ಭಿನ್ನ ದೃಷ್ಟಿಯುಂಟಾಗಿದೆ. ಕೊನೆಯದೆಂದರೆ:— ಈ ನೂತನ ದೃಷ್ಟಿಯಿಂದ ಪೂರ್ವೇತಿಹಾಸವನ್ನೆಲ್ಲ ನೋಡಹಚ್ಚಿತು. ಪರಂಪರಾಗತವಾದ ಆಚಾರಗಳ ಅಬದ್ಧ ವ್ಯವಹಾರದಲ್ಲಿ ಮುಳುಗಿ ಹೋದ ಪ್ರಾಚೀನ ಅರ್ಥಸ್ವಾರಶ್ಯವು ಒಂದಿಷ್ಟಾದರೂ ಇದರಿಂದ ಕೈಗೆ ಬಂದಿತು. ಇಷ್ಟೇ ಅಲ್ಲ, ಅದರಿಂದಲೇ ಒಂದು ಹೊಸ ಬೆಳಕು ಹರಿದು ಬಂದು ಪುರಾಣ ತತ್ತ್ವಗಳಿಗೇ ಹೊಸಕಳೆಯುಂಟಾಗಿ ನವಸೃಷ್ಟಿ-ವಿಕಾಸಗಳ ವಿಚಿತ್ರ-ವಾದ ಅಂತಃ ಶಕ್ತಿಗಳು ಹೊರಹೊಮ್ಮಿವೆ. ಇಂಥ ಪರಿಣಾಮಗಳನ್ನು ತಂದ ಪ್ರಥಮಕಾಲವೂ ನದವರು ನಮ್ಮ ಪ್ರಾಚೀನ ಸಂಸ್ಕೃತಿಯನ್ನು ತೀರ ತಪ್ಪು ತಿಳಿದುಕೊಂಡಿದ್ದರೆಂಬುದು ಹೋಗಲಿ; ಸನಾತನಿಗಳ ವಿಚಾರ ಪದ್ಧತಿಯೂ ಒತ್ತಾಯದಿಂದಲಾದರೂ ಈ ಮೂಲಕ ಪುನರಾ-ಲೋಚನೆಗೆ ಪ್ರಾರಂಭಿಸಿತು. ಇದೇ ಪ್ರಧಾನವಾದ ಸಂಗತಿಯು.

## ನವಜಾಗೃತಿಯ ಎರಡನೆಯ ಮೆಟ್ಟಿಲು: ಸನಾತನದ ಪ್ರತಿಧ್ವನಿ

ಇನ್ನು ದ್ವಿತೀಯ ಯುಗವು. ಆಗ್ಗೆ ಭಾರತೀಯ ಚಿತ್ತವು ನವೀನ ಕಲ್ಪಗಳನ್ನು ಪ್ರತೀಕರಿಸಿ, ಭಗ್ನವಾದ ತನ್ನ ಸಹಜ ಜಾತೀಯ ಆಸನ ವನ್ನು ಸ್ಥಿರಪಡಿಸಿಕೊಳ್ಳಲು ಹವಣಿಸಿದ್ದರಿಂದ ಮೇಲ್ಕಾಣಿಸಿದ ಶಕ್ತಿ ಗಳನ್ನೂ ಪ್ರವೃತ್ತಿಗಳನ್ನೂ ಹೆಚ್ಚು ಫಲಪ್ರದವಾಗುವ ಹಾಗು ನಿರ್ದಿ-ಷ್ಟವಾದ ಕಾರ್ಯ ಮಾರ್ಗಗಳಲ್ಲಿ ನೂಗಲನುವಾಯಿತು. ಆಂಗ್ಲ-ರಾಗುವ ಪ್ರಚೋದನೆಗೆ ಹಳೆಯ ರಾಷ್ಟ್ರಭಾವನೆಯು ಎದುರಾಗಿ ಇದರ ಪ್ರಭಾವವೇ ಜೀವನದಲ್ಲಿ ತುಂಬ ವ್ಯಾಪಿಸಿಕೊಂಡಿತು. ತಮ್ಮ ನೋಡು-ವಳಿಕೆಯಲ್ಲಿ ಇನ್ನೂ ಪಾಶ್ಚಿಮಾತ್ಯರಂತೆಯೇ ಮೊಂಡತನದಿಂದ ನಟಿ-ಸುವ ವಿದ್ಯಾವಂತರ ಸಂಖ್ಯೆಯು ಸದ್ಯಕ್ಕೆ ಕ್ಷೀಣಿಸುತ್ತ ನಡೆದಿದೆ. ಭೂತ ಕಾಲವನ್ನು ಆಸಿಮಿಸಿ ನೋಡದೆ ಬೊಬ್ಬಿರಿದು ದೂಷಿಸುವ ಪಂಥವನ್ನೂ

ಇದ್ದ ಕೆಲವರು ಬಿಟ್ಟಿದ್ದಾರೆ; ಇಲ್ಲದಿದ್ದರೆ, ಒಮ್ಮೊಮ್ಮೊಮ್ಮೆ ಇದು ಸರ್ವ ಸಾಮಾನ್ಯ ರೀತಿಯಾಗಿತ್ತು. ಎಷ್ಟೋ ವಿದ್ಯಾವಂತರು ತಮ್ಮ ನವೀನತೆಯಲ್ಲಿಯೇ ಪ್ರಾಚೀನೋದ್ದೇಶ ಭಾವನೆಗಳನ್ನು ಹೆಚ್ಚಿಹೆಚ್ಚು ತುಂಬಲಾರಂಭಿಸಿ, ಭಾರತೀಯ ವಸ್ತುಪ್ರಪಂಚಕ್ಕೂ ಲಕ್ಷ್ಯಲಕ್ಷಣ ಗಳಿಗೂ ಸಾರ್ಥಕತೆಯಾಗುವ ಸೂಕ್ಷ್ಮದೃಷ್ಟಿ ಪಡೆದು, ಹಳೆಯ ತಂತ್ರ ಕ್ಕಿಂತ ಮಂತ್ರದ ಸ್ವೀಕರಣವು ಬೆಳೆದು, ನವೀನ ಭಾಷ್ಯಾರ್ಥ ಪ್ರತಿ ಪಾದನೆಯ ಪ್ರಯತ್ನಗಳನ್ನೂ ಮಾಡಲಣಿಸಿದರು. ಮೊದಮೊದಲು, ಅವರ ಅಂತಃಸೂತ್ರಾರ್ಥವೂ ಕಾಣಾಕಾಣಾ ಹೊಸ ಮಾದರಿಯದಾಗಿತ್ತು; ಎಲ್ಲೆಲ್ಲಿಯೂ ಪಡುವಣದಿಂದ ಪ್ರವಹಿಸುವ ಪ್ರೇರಣೆಯ ಗುಟ್ಟು-ರಟ್ಟಾಗುತ್ತಿತ್ತಾದರೂ ಆತ್ಮಸಂತೋಷದಿಂದ ಪುರಾತನ ವಿಚಾರಗಳನ್ನೂ ಗ್ರಹಿಸಿಕೊಂಡು ಅದರ ಸತ್ತ್ವಸಾರದ ಬೆಳಕು ಬಣ್ಣಗಳಲ್ಲಿ ಅದ್ದಿ ಅದು ಹೊರಬರುತ್ತಿತ್ತು. ಬರಬರುತ್ತ, ಆದುವರೆಗೂ ಒಳಗೊಳಗೆ ವ್ಯಾಪಿಸಿ ಕೊಂಡ ಭಾರತ ಶಕ್ತಿಯು ಹೊರಸೂಸಿ ಮೂಲೋದ್ದೇಶಗಳನ್ನು ಅದ್ದಿ, ಮಿದ್ದಿ, ಅವುಗಳ ಅರ್ಥ, ಧ್ವನಿ, ಶೈಲಿ, ರಸಪಾಕಗಳಲ್ಲಿಯೂ ತನ್ನ - ತನವನ್ನು ಮೊಳೆಯಿಸಿತು. ಈ ಸಂಕ್ರಮಣಾವಸ್ಥೆಯ ಉದಾ ಹರಣೆಗೆಂದು ನಮ್ಮ ಅರ್ವಾಚೀನ ಸಾಹಿತ್ಯದಲ್ಲಿ ಸ್ವಯಂಭು ಪ್ರತಿಭೆಗೆ ಬೆರಳೆತ್ತಿಸಿಂತ ಬಂಕಿಮಚಂದ್ರ ಚಟರ್ಜಿ ಹಾಗು ರವೀಂದ್ರನಾಥ ಠಾಕೂರರ ಗ್ರಂಥಗಳನ್ನು ಹೇಳಬಹುದು.

## ಸನಾತನವು ನೂತನಕ್ಕೆ ಪ್ರತಿಭಟಿಸುವದರ ಅರ್ಥವು ಸಮುತ್ಸಂಯುಚ ಅಪೇಕ್ಷೆಯೆ

ಈ ಆಂದೋಲನದ ಬದಿಬದಿಗೇ ಅತಿ ಪ್ರಬಲವೂ ವೈಲಕ್ಷಣ್ಯ-ವುಳ್ಳದ್ದೂ ಆದ ವಿಚಾರದ ಪ್ರತಿ ಪ್ರವಾಹವೊಂದು ಮೊದಲಿಂದಲೂ ಹರಿಯುತ್ತಲಿದೆ. ಅದು ಪೂರ್ಣ ಪ್ರತೀಕಾರದಿಂದಲೇ ಮಾರ್ಗ ಕ್ರಮಣ ನಡೆಸಿತು ; ಭಾರತೀಯರದೆಲ್ಲ ಒಸಿದೆಯೋ ಅದು ಗ್ರಾಹ್ಯ ಮತ್ತು

ಸಮರ್ಥನೀಯ ಎಂಬುದೇ ಇದರ ವಾದ— ಅದೇಕೆ? ಅದು ಭಾರತೀಯರದೆಂದು; ಇಷ್ಟೇ ಉತ್ತರ. ಅಷ್ಟೇ ಯುಕ್ತಿ. ಈ ವೃತ್ತಿಯ ತರಂಗಗಳು, ಪ್ರಭಾವದ ಪರಿಣಾಮಗಳು ನಮ್ಮಲ್ಲಿನ್ನೂ ಇವೆ. ಇದಕ್ಕೆ ಬರುವ ಫಲವಿನ್ನೂ ಬಂದಿಲ್ಲ. ಆದರೆ ನಿಜವಾಗಿ ತಿಳಿದು ನೋಡಿದರೆ, ಸೂಕ್ಷ್ಮತರವಾದ ಸಂಗ್ರಾಹಕ ಮತ್ತು ಸಂಯೋಜಕ ಕ್ರಿಯೆಯ ಪ್ರಾರಂಭವೇ ಪ್ರತೀಕಾರದಲ್ಲಾಗುವದು. ಯಾಕೆಂದರೆ, ಹಳೆಯ ಸಾಂಪ್ರದಾಯಿಕರಿಗೂ ಹೊಸ ತಾರ್ಕಿಕರಿಗೂ ಇಬ್ಬರಿಗೂ ಸಮನಾಗಿ ಸಮಾಧಾನ ಕೊಡುವಂತೆ ಪುರಾತನ ತತ್ತ್ವಗಳ ಸಮರ್ಥನೆ ಮಾಡಬೇಕಾದ ಅಗತ್ಯದ ಅರ್ಥವೇ ಅದು. ಇದರಿಂದ ಹಳೆಯದಕ್ಕೆಯೇ 'ಪುನರಾಗಮನಾಯುಚ' ಎಂದಂತಾಗದೆ, ತಿಳಿದೋ ತಿಳಿಯದೆಯೋ ಪುನರ್ಮಂಡನವನ್ನೇ ಮಾಡಬೇಕಾಗುವದು. ಮತ್ತು ಈ ಪುನರಾಗಮನದ ಪರಿಪಕ್ವತರವಾದ ಮಾರ್ಗವು ಪುನರ್ಮಂಡನದಲ್ಲಿ ಸಮನ್ವಯ ತತ್ತ್ವದಿಂದ ಸಾಗುವದು. ಪ್ರಾಚೀನ ಪಾರಮಾರ್ಥಿಕತೆಯಲ್ಲಿ ಸೈಗೂಡಬಹುದಾದ, ಅಥವಾ ಅದರ ಮಹಾವಿಕಾಸ ಪ್ರವಾಹದ ಒಡಲನ್ನು ಹಿಗ್ಗಿಸಬಹುದಾದ ಯಾವುದೂ ನವೀನಾನುಬಂಧವಿರಲಿ ಅದನ್ನು ಸ್ವೀಕರಿಸಿ, ಜೀರ್ಣವಾದುದನ್ನು ಕರಗಿಸಿ, ಬೇರೆ ಯರಕಕ್ಕೆ ಹಾಕಲು ಅಥವಾ ತ್ಯಜಿಸಲು ಸಹ ಹಿಂದೆ ಮುಂದೆ ನೋಡುವದಿಲ್ಲ. ಹೀಗೆ ಮಾಡುವಲ್ಲಿ, ಪ್ರಾಚೀನ ಸಂಸ್ಕೃತಿಯ ಆತ್ಮದ ಸಂಪಾದನೆಯಾಗಿ, ಅದರ ಆಚಾರಗಳಿಗೆ ತಕ್ಕ ಆದರವನ್ನು ತೋರಿಸಿ, ಕೆಲವೊಮ್ಮೆ ಜೀವ ತುಂಬಿಸಿದಂತೆಯೂ ಆಗಿದೆ. ಹೀಗೆ ಭೂತ ವರ್ತಮಾನಗಳನ್ನು ಜೀರ್ಣೋದ್ಧಾರ ಮಾಡಿ ಜೋಪಾಸನೆ ಮಾಡುವ ನಿರ್ದಾಕ್ಷಿಣ್ಯದ ನಡತೆಯ ಪ್ರಮುಖ ಮೂರ್ತಿಯೂ ಅತಿ ಪ್ರಬಲ ಪ್ರತಿಪಾದಕನೂ, ತನ್ನ ಜೀವಮಾನವೆಲ್ಲವೂ, ವಿವೇಕಾನಂದನೆ ಆಗಿದ್ದನು.

## ಹಳೆ ಹೊಸಗಳ ಹಂಡಬಂಡತನ ಮೀರಿದ ನವಸೃಷ್ಟಿಯ ಕುರುಹು

ಆದರೆ ಇದರ ಮುಗಿತಾಯವಿಲ್ಲಿಗಾಗಲಾರದು. ತನ್ನಿಂದ ತಾನೇ ಈ ಕ್ರಮದಲ್ಲಿ ನವಸೃಷ್ಟಿ ತತ್ತ್ವವೊಂದು ಕುಡಿಯೊಡೆಯಲೇ ಬೇಕು. ಇಲ್ಲದಿದ್ದರೆ, ಚಿತ್ರವಿಚಿತ್ರ ತರಾವಳಿಯ ಉಡುಪಿನಿಂದ ಹಂಡಬಂಡ ಸಾಹೇಬರಂತೆ ಕಾಣುವ ಕೆಲ ಹಿಂದೀಯರಂತೆ ಈ ಎರಡು ವಿಚಾರ ವೃತ್ತಿಪ್ರಕಾರದ, ಫಲವೆಂದರೆ ಅಸಂಬದ್ಧ ಏಕೀಕರಣವಲ್ಲದೆ ಬೇರೆ ಯಲ್ಲವೆಂದಾಗಬಹುದಾಗಿತ್ತು. ಅತ್ಯಂತ ಗಾಢವಾದ ತನ್ನಾತ್ಮವು ಸಹಜಾತ ಶಕ್ತಿಯನ್ನು ಸಂಪೂರ್ಣ ಪಡೆದು, ಅದು ತನ್ನ ಇಂದಿನ ಮುಂದಿನ ಜೀವನ ಕ್ರಮಕ್ಕೆ ಬೇಕಾದ ಸಾಮರ್ಥ್ಯ ಸಿದ್ಧಿಗಳನ್ನು ಸಮಂಜ ಸವಾಗಿ ಹೊಂದಿಸಿ, ಪೂರ್ಣಗೊಳಿಸಲೆಂದು ಭಾರತವು ಅದನ್ನೇ ಸಾಹಿತ್ಯ ವನ್ನಾಗಿ ಅಣಿ ಮಾಡಬೇಕಾಗಿದೆ. ಈ ಬಗೆಯ ಸಜೀವವೂ ಸ್ವಯಂ-ಸಂಜಾತವೂ ಆದ ಕೃತಿಯ ಎದ್ದು ಕಾಣುವ ಉದಾಹರಣೆ ಹೇಳುವ ದಾದರೆ ಭಾರತೀಯ ನವಚಿತ್ರಕಲಾಸಾಂಪ್ರದಾಯವೇ ಸರಿ. ಭಾರತೀಯ ನವಜನ್ಮದ ಪೂರ್ಣ ಸಾಕ್ಷಾತ್ಕಾರದ ಚಿನ್ಹದೋರಬೇಕಾದರೆ ರಾಷ್ಟ್ರೀಯ ಜೀವನದ ಪ್ರತಿಯೊಂದು ಕಾರ್ಯಕ್ಷೇತ್ರದಲ್ಲಿಯೂ ಈ ಬಗೆಯ ಸ್ವಯಂಭು ಸೃಷ್ಟಿಯ ಪುರೋಗತಿಯಾಗಬೇಕು.

---

## ಮೂರನೆಯ ಪ್ರಕರಣ

---

### ಪ್ರಾರಂಭದ ಆರಂಭ

ಸಮಸ್ತಸೃಷ್ಟಿಯು ಯಾವ ನಿಶ್ಚಿತ ರೂಪಗಳನ್ನು ತಾಳ ಬಹುದೆಂದು ಮುಂಗಾಣಲು, ಸದ್ಯದ ವೃತ್ತಿಪ್ರವೃತ್ತಿಗಳ ಅನಿಶ್ಚಿತ ಸಾಂಕರ್ಯದಲ್ಲಿ ಒಳಸುಗ್ಗಲು ಹವಣಿಸಿದರೆ, ಆ ಪ್ರಯತ್ನಕ್ಕೆ ಬರುವ ಫಲವೂ ಅಷ್ಟೇ ಇದೆ. ಹಾಗೆ ಮಾಡುವದೂ, ಅಥವಾ ಸ್ವರ ಹೊಂದಿಸಲಿರುವ ವಾದ್ಯದಿಂದ ಹೊರಡುವ ಶಬ್ದ ಸಂತತಿಯನ್ನು ಕೇಳಿ ಅದರ ರಾಗವಿಂತಹದೆಂದು ಸಿದ್ಧಾಂತ ಕಟ್ಟಲು ಹೊರಡುವದೂ ಒಂದೇ. ಅಲ್ಲಿಯೊ ಇಲ್ಲಿಯೊ ಕೆಲಕೆಲವು ನಿಶ್ಚಿತ ಸೂಚನೆಗಳನ್ನು ಕಂಡು ಹಿಡಿಯಬಹುದಾದರೂ ಇವೂ ಪ್ರಥಮ ಲಕ್ಷಣಗಳು ಮಾತ್ರ; ಇವುಗಳ ಲಕ್ಷ್ಯಾರ್ಥವನ್ನೂ ಮೀರಿ ಪರಮ ಅರ್ಥವೊಂದು ಹಿಂದೆ ಹುದುಗಿರುವದಾಗಿ ನಾವು ನಿಶ್ಚಯವಾಗಿ ತಿಳಿಯಲೇ ಬೇಕು. ಈ ಮಾತು, ಧರ್ಮ ಪರಮಾರ್ಥಗಳಲ್ಲಿಯೂ, ವಿಚಾರ-ವಿಜ್ಞಾನಗಳಲ್ಲಿಯೂ, ಕಾವ್ಯ-ಕಲೆಗಳಲ್ಲಿಯೂ, ಸಮಾಜ ರಾಜಕಾರಣಗಳಲ್ಲಿಯೂ ನಿಶ್ಚಿತವೇ. ಎಲ್ಲೆಡೆಯಲ್ಲಿಯೂ ಈಗೆಲ್ಲಿಯೋ ಇನ್ನೂ ಪ್ರಾರಂಭದ ಆರಂಭವಾಗಿದೆ.

### ಭಾರತದ ಚಿತ್ತವೃತ್ತಿ–ಆಧ್ಯಾತ್ಮಿಕತೆ

ಒಂದು ಮಾತು ಮಾತ್ರ ನಿಜ. ಭೂತಕಾಲದಂತೆ ಭವಿಷ್ಯತ್ಕಾಲದಲ್ಲಿಯೂ ಭಾರತದ ಷಡ್ಜವೂ ಜೀವಸ್ವರವೂ ಆಧ್ಯಾತ್ಮ ಬುದ್ಧಿಯಲ್ಲಿಯೇ ಅಂಕುರಿಸುವದು ಆಧ್ಯಾತ್ಮಿಕತೆಯೆಂದರೆ ಜಗನ್ಮಿಥ್ಯೆಯೆನ್ನುವ ವೇದಾಂತಿಕ ರೀತಿಯಾಗಲಿ, ಕೈಕಟ್ಟಿಕೊಂಡು ಕಣ್ಣು ಮುಚ್ಚಿಕೊಳ್ಳುವದಾಗಲಿ

ಅಲ್ಲ. ಭಾರತ ಸಂಸ್ಕೃತಿಯು ಕೆಲಕೆಲವು ಐರೋಪ್ಯ ವಿಮರ್ಶಕರೂ, ಟೀಕಾಕಾರರೂ ಏನನ್ನೆಂದರೂ ಭಾರತವು ತನ್ನ ಶಕ್ತ್ಯುತ್ಸಾಹಗಳ ವೈಭವದ ಪೂರ್ವಯುಗಗಳಲ್ಲಿ ಹೀಗಿರಲಿಲ್ಲ; ಮುಂದೆ ಹೀಗೆ ಉಳಿಯಲಾರದು. ವೇದಾಂತಿಕ ವಿಚಾರ ಸರಣಿಯು ಯಾವಾಗಲೂ ಭಾರತೀಯ ಚಿತ್ತ ರಚನೆಯ ಘಟಕಗಳಲ್ಲೊಂದಾಗಿ ಉಳಿಯತಕ್ಕದ್ದೇ; ಈ ಮಾರ್ಗದಲ್ಲಿ ಅದರ ಬೃಹತ್ತರವಾದ ಸಾರ್ವಭೌಮ ರಸ್ತೆಗಳು ಎಂದೂ ಕಳೆಗುಂದಲಾರವೆಂಬ ಆಸೆಯೂ ಇದೆ. ಆದರೆ ಪದಾರ್ಥವಿಜ್ಞಾನಶಾಸ್ತ್ರದ ವಸ್ತುಜ್ಞಾನವನ್ನೇ ಪ್ರಮಾಣವಾಗಿಟ್ಟುಕೊಂಡು ಸ್ಥೂಲ ವರ್ಗೀಕರಣದ ತರ್ಕಪದ್ಧತಿಯನ್ನನುಸರಿಸಿ ತತ್ತ್ವಜ್ಞಾನವೆಂದು ಕೆಲಸಮಾಡಿದ ಅರ್ವಾಚೀನ ಐರೋಪ್ಯರ ವೇದಾಂತಕ್ಕೂ, ಫ್ರೆಂಚರ ಇಲ್ಲವೆ ಜರ್ಮನ್ನರ ಆಡಂಬರದ ಅಥವಾ ಅಗಾಧವಾದ ವಿಚಾರ ಪ್ರಪಂಚ ವಿಸ್ತಾರದ ವೇದಾಂತಕ್ಕೂ ಅಂತರವಿದ್ದಷ್ಟೇ ನಮ್ಮ ಭಾರತೀಯ ವೇದಾಂತ ದರ್ಶನಕ್ಕೂ ಅವರ ಪದ್ಧತಿಗೂ ಇರುವದು. ವೇದಾಂತವು ಎಂದಿನಿಂದಲೂ ಆತ್ಮಸಾಕ್ಷಾತ್ಕಾರದ ಬೌದ್ಧಿಕ ದರ್ಶನವನ್ನೇ ಪ್ರಮುಖವಾಗಿಟ್ಟುಕೊಂಡಿದೆ. ಏನೋ ಇತ್ತೀಚೆ ಅದರ ಒಲವು ಪಾರಲೌಕಿಕವಾಯಿತು. ಕ್ರಾಂತದರ್ಶನವನ್ನೂ ಅಂತಃಪ್ರೇರಣೆಯನ್ನೂ ಅವಲಂಬಿಸಿದ ವೈದಿಕ ವೇದಾಂತವೇ ಆಗಲಿ, ನವರಚನೆ ನವೀನತೆಗಳುಳ್ಳ ಪ್ರಚಂಡ ಬುದ್ಧಿವಾದದ ಕಾಲಕ್ಕೆ ಹುಟ್ಟಿದ ಗೀತೆಯಕಾಲದ ವೇದಾಂತವೇ ಆಗಲಿ ಯಾವವೂ ಸ್ವಭಾವತಃ ಪ್ರಪಂಚ ವಿರಕ್ತಿಯುಳ್ಳವುಗಳಾಗಿರಲಿಲ್ಲ. ಇಹ ಜೀವಿತಕ್ಕೇನಾದರೂ ನಿಜವಾದ ಬೆಲೆಯಿದೆಯೋ ಎಂದು ಸಂಶಯಾಕುಲತೆಯನ್ನುಂಟುಮಾಡಿದ ಬೌದ್ಧ ಮತವೂ ಕೂಡ ಅದನ್ನೊಂದು ಬುದ್ಧಿವಾದವೆಂದೇ ಹೂಡಿತು. ಆ ಮತದ ಚೈತನ್ಯದಿಂದ, ನೀತಿಶಾಸ್ತ್ರದಿಂದ, ಸಾಧನಪದ್ಧತಿಯಿಂದ ಮಾನವ ಜೀವನಕ್ಕೆ ಹೊಸತ್ರಾಣ, ಹೊಸ ಅರ್ಥ, ಸುಕುಮಾರವಾದ ಆದರ್ಶವಾದಿತ್ವಗಳು ಬಂದು, ಪ್ರಪಂಚ ನಿರೂಪಣಾಮಯವಾದ ಕಲೆಗಳಿಗೂ ವ್ಯವಹಾರ ರಾಜಕಾರ್ಯಗಳಿಗೂ

ನವಜನ್ಮವೇ ಬಂದಿತು. ದೃಢವಾಗಿ ಆತ್ಮ ತತ್ತ್ವವನ್ನರಿತು, ಜೀವನವನ್ನು ಹೊಸ ಅಚ್ಚಿಗೆ ಹಾಕಿ, ಜೀವಕಳೆದುಂಬುವದೇ ಭಾರತೀಯ ಚಿತ್ತದ ಸ್ವಭಾವ ಪ್ರವೃತ್ತಿಯಾಗಿರುವದರಿಂದ, ಅದಕ್ಕೆ ಗೌರವ, ತ್ರಾಣ, ನಿರಾಮಯತೆ ಬಂದಾಗಲೆಲ್ಲ ಈ ಸಂಘಕ್ಕದು ಮರಳಲೇ ಬೇಕು.

## ಹೊಸ ಹೊಸ ಮಿಸುಕುಗಳಲ್ಲೆಲ್ಲ ಅಧ್ಯಾತ್ಮದ ನಾಡಿಯೇ ಹಾರುತ್ತಿದೆ

ಹಿಂದುಸ್ಥಾನದೊಳಗಿನ ಇತಿಹಾಸದ ಎಲ್ಲ ಮಹಾಂದೋಲನಗಳು ಒಂದು ಪಾರಮಾರ್ಥಿಕ ನವವಿಚಾರದಿಂದಲೂ ಸಾಮಾನ್ಯವಾಗಿ ಒಂದು ನವಮತ ಪ್ರಚಾರದಿಂದಲೂ, ಪ್ರಾರಂಭವಾಗಿವೆ. ಇಯೋರೋಪಿನ ನವ-ಪ್ರಭಾವವು, ಹಾಗೆ ನೋಡಿದರೆ, ಬೌದ್ಧಿಕ, ತಾರ್ಕಿಕವಷ್ಟೇ ಅಲ್ಲ, ಬಹಳ ಸಲ ಮತ ಧರ್ಮ-ದ್ವೇಷಿಯಾಗಿದ್ದು, ಹದಿನೆಂಟು ಹತ್ತೊಂಬತ್ತನೆಯ ಶತಮಾನಗಳ ಐಹಿಕ, ಲೌಕಿಕ, ಹಾಗು ವ್ಯವಹಾರಿಕ ವಿಚಾರಗಳಿಂದಲೇ ತನ್ನ ಆದರ್ಶಗಳನ್ನು ಕಟ್ಟಿಕೊಂಡಿತು. ಅಂಥ ಯುರೋಪ್ಯ ಪ್ರಭಾವ ದಿಂದಲೂ ಹಿಂದುಸ್ಥಾನದಲ್ಲಿ ಧರ್ಮ ಸುಧಾರಣೆಯ ಪ್ರಯತ್ನಗಳೂ ನವಮತದ ಸಮಾಜ ನಿರ್ಮಿತಿಯೂ ಆಗಬೇಕೆಂದರೆ ಭಾರತದ ಬೀಜ ಭೂತಗುಣಕ್ಕೆ ಸಮರ್ಪಕವಾದ ನಿದರ್ಶನವು ಬೇರೆ ಯಾವುದಿರಬೇಕು? ಭಾರತೀಯ ಚಿತ್ತದ ಹುಟ್ಟುಬುದ್ಧಿಯೇ ಹೀಗಿದೆ. ವಿಚಾರ ವ್ಯವಹಾರ ಗಳ ಪುನರ್ರಚನೆಯನ್ನೇ ಮಾಡುವದಾದರೆ ಅದು ಅಧ್ಯಾತ್ಮಿಕ ಅಸ್ತಿವಾರ ದಿಂದಲೂ ಧರ್ಮೋದ್ದೇಶ, ಮತಾಚಾರಗಳಿಂದಲೂ ಅದು ಪ್ರಯತ್ನಿಸು ವದು. 'ಬ್ರಹ್ಮೋ ಸಮಾಜ'ದ ಬೀಜಾರೋಪಣೆಯೇ ವಿಶ್ವವ್ಯಾಪಕ ವಿಚಾರದಿಂದಲೂ, ಅದರ ಸಮನ್ವಯ ಪದ್ಧತಿಯು ಮಧುಮಕ್ಷಿಕಾ-ನ್ಯಾಯದಂತೆ ಹತ್ತು ಮತಗಳ ರಸ ತಂದು ಹನ್ನೊಂದನೆಯ ಜೇನು ಹುಟ್ಟಿಸಿದಂತೆಯೂ ಇತ್ತು. ವೇದವೇದಾಂತಗಳ ಪ್ರೇರಣೆಯು ಅದಕ್ಕೆ ಮೊದಲನೆಯದು; ಆಂಗ್ಲ ಏಕದೇವವಾದಿಗಳಂತೆ ಆಚಾರ ಶೀಲಗಳಿರು ವದು ಎರಡನೆಯದು; ಒಂದು ಕೊಟ್ಟು ಅದರ ಪ್ರಕೃತಿ ಸ್ವಭಾವ; ಒಂದು

ತೊಟ್ಟು ಕ್ರೈಸ್ತಾನುಕರಣ ಪ್ರಭಾವ, ಕೊನೆಗೆ ಉಳಿದ್ದೆಲ್ಲ ಬುದ್ಧಿ ತರ್ಕ ಪ್ರಧಾನವಾದ ಮತ ಧರ್ಮಾವೇಶದ ರೀತಿ. ಅದರಲ್ಲಿಯೂ ನೆನಪಿಡ ಬೇಕಾದ ಸಂಗತಿಯೆಂದರೆ:— ಅದು ಹೊರಟದ್ದು ಉಪನಿಷದ್ಧರ್ಮದ ಪುನರ್ಮಂಡನೆಗೆ; ಅದು ಹಿಡಿದದ್ದು ಹಿಂದಿನ ಮತಧರ್ಮಗಳಿಗೆ ಪ್ರತಿಪಕ್ಷ ಯಾದ ಪಂಥ: ಹೀಗಿದ್ದು ಅದೂ ಕೂಡ ಭಾರತ ಜಾತೀಯ ಸ್ವಭಾವ ಸಾಂಪ್ರದಾಯಗಳ ಮಾರ್ಗವನ್ನೇ ಹಿಡಿದು ಮುಂದೆ ಮೂರು ಶಾಖೆಗಳಾಗಿ ಒಡೆದಾಗ ಅದರಲ್ಲಿಯೂ ಜ್ಞಾನ, ಭಕ್ತಿ, ಕರ್ಮ ಪ್ರಧಾನವಾದ ಬಣಗ-ಳಾದವು. ಪಂಜಾಬಿನ ಆರ್ಯ ಸಮಾಜವೂ ವೇದಕ್ಕೊಂದು ನೂತನ ಭಾಷ್ಯ ಬರೆದು ಪ್ರತಿಷ್ಠೆಗೊಂಡು ಇಂದಿನ ಜೀವನಕ್ಕೆ ಹಿಂದಿನ ವೈದಿಕ ತತ್ತ್ವಪ್ರಯೋಗ ಮಾಡಬೇಕೆಂದೆಣಿಸಿತು. ರಾಮಕೃಷ್ಣ, ವಿವೇಕಾ-ನಂದರ ಪ್ರಖ್ಯಾತ ಹೆಸರುಗಳೊಂದಿಗೆ ಕೀರ್ತಿವೆತ್ತ ವಿಚಾರಾಂದೋಲ ನವೂ ಪೂರ್ವದ ಆತ್ಮಾನುಭವ ಮತ್ತು ಧರ್ಮೋದ್ದೇಶಗಳ ವಿಶಾಲ ಸಮನ್ವಯದಿಂದ ಮೊದಲಾಗಿ ಮಠಸ್ಥಾಪನೆ ಮತ್ತು ವಿರಕ್ತಿಗಳ ಡಿಂಡಿ ಮವನ್ನು ಸಾರಿದರೂ, ನವಜೀವನದ ಕುರುಹುಗಳಿಂದಲೂ ಪ್ರಬಲವಾದ ಜೀವ ಕಾರುಣ್ಯದಿಂಮೊಡಗೂಡಿದ ಧರ್ಮ ಪ್ರಚಾರಕರ ಪ್ರಸರಣಾವೇಶ-ದಿಂದಲೂ ಕೊನೆಗಂಡಿತು. ಇದಲ್ಲದೆ, * ಈಗಿರುವದಕ್ಕಿಂತ ಇಪ್ಪತ್ತು ಮೂವತ್ತು ವರ್ಷಗಳ ಪೂರ್ವದಲ್ಲಿ ಸಾಂಪ್ರದಾಯಿಕ ಹಿಂದೂ ಧರ್ಮದ ಪುನರುತ್ಥಾನಾಂದೋಲನವೊಂದು ಆಗಿ ಹೋಯಿತು. ಹಿಂದುಸ್ಥಾನದ ಉಳಿದೆಡೆಗಳಲ್ಲಿಯೂ ಈ ಬೃಹತ್ತರವಾದ ಪ್ರಾದೇಶಿಕ ಚಳವಳಿಗಳ ತರಂಗಸ್ಪಂದಗಳು ಹೋಗಿ ಮುಟ್ಟಿದವು, ಅಥವಾ ತಂತಮ್ಮ ಮಟ್ಟಿಗೆ ಸಣ್ಣಪುಟ್ಟ ಚಟುವಟಿಕೆಗಳಿಂದ ಅವೂ ಹೊಯ್ದಾಡಿದವು. ಬಂಗಾಲದಲ್ಲಿ ಅಭಿನವ ವೈಷ್ಣವ ಧರ್ಮದ ಚೇತನೆಯೊಂದು ಆ ಸೀಮೆಯ ಜನರ ಧಾರ್ಮಿಕ ಮನಸ್ಸಿನ ಇತ್ತೀಚಿನ ಬೆಳವಣಿಗೆಯಲ್ಲಿ ಕಂಡು ಬಂದರೂ

---

* ಈ ಮಾತು ೧೯೧೮ ಇಸ್ವಿಯಲ್ಲಿ ಬರೆದದ್ದು. ಈಗ ಸನಾತನಿಗಳ ಚಳ-ವಳಿಯು ಮತ್ತೆ ಪ್ರಬಲವಾಗಿದೆ.

ಆದರ ಸೃಷ್ಟಿ ಉಪಕ್ರಮದ ಚಲನ ವಲನ ಕ್ರಿಯಾಜಾಲವಿನ್ನೂ ಮುಗಿದಿಲ್ಲ. ಹಿಂದುಸ್ಥಾನದಲ್ಲಿ ಆನೇಕ ಹಿಮಾಚಲವಾಗಿ ಹಳೆಯ ಮತ ಪಂಗಡಗಳೂ, ಸಾಧನ ಮಾರ್ಗಗಳೂ ಮತ್ತೆ ಪ್ರಾಣ ತಂದುಕೊಂಡು, ತಮ್ಮ ಡಂಗುರವನ್ನು ಒತ್ತಿ ಸಾರಲು, ಬಾಯಿ ಮಾಡಿ, ಕೈಕಾಲು ಅಲ್ಲಾಡಿಸುತ್ತಲಿವೆ. ಇಸ್ಲಾಮೀ ಧರ್ಮವೂ ಇತ್ತೀಚೆ ಹೊಸ ಜಾಗೃತಿಯಿಂದ ಜಾಗೃತವಾಗಿ ಮೂಲ ಇಸ್ಲಾಮದ ಆದರ್ಶಗಳಿಂದ ಮೈದುಂಬಿ ಪ್ರಾಣ ಪಡೆಯಲು ಹವಣಿಸುತ್ತಿದೆ. ಇದರೊಡನೊಡನೆಯೇ ಹಿಂದುಸ್ಥಾನದೊಳಗಿನ ಮುಸಲ್ಮಾನ ಜನತೆಯೂ ಬಹಳ ದಿನದ ನಿಶ್ಚೇಷ್ಟತೆಯಿಂದ ಮೈ ಜಾಡಿಸಿ ಏನೋ ಕೆಲಸ ಮಾಡಲಿರುವಂತೆ ಎಚ್ಚರಾಗುತ್ತಲಿದೆ.

## ಪಾರಮಾರ್ಥಿಕ ಕ್ಷೇತ್ರದಲ್ಲಿ ಸಿಚ್ಚಳವಾದ ಪ್ರಗತಿಯು

ಇವುಗಳಿಂದವೂ ಆಗಲಿ, ಇವೆಲ್ಲ ಕೂಡಿಯಾಗಲಿ ಯಾವ ನಿಶ್ಚಿತತೆಯನ್ನೂ ಹೇಳಲಿಕ್ಕಿಲ್ಲವಾದರೂ ಭಾರತದ ಅಧ್ಯಾತ್ಮ ಚಿತ್ತವು ಆತ್ಮ ಸಂಪಾದನೆಗಾಗಿಯೂ ಹಿಂದೆ ಕಳೆದದ್ದನ್ನು ಗಳಿಸಿ ಮುಂದಿನ ಕೆಲಸಕ್ಕೆ ಸಜ್ಜವಾಗುವದಕ್ಕಾಗಿಯೂ ಸಿದ್ಧತೆ ಮಾಡುತ್ತಿರಲು ಸಾಕು. ಹಿಂದು-ಸ್ಥಾನವು ಸರ್ವ ಧರ್ಮಗಳ ಸಮ್ಮೇಳನ ಸ್ಥಾನವಾಗಿದೆಯಲ್ಲದೆ ಹಿಂದೂ ಧರ್ಮವೊಂದೇ ಕೂಡ ವಿಶಾಲ ವ್ಯೂಹಗಳ ಜಂಜಾಲವಾಗಿದೆ. ಅದೊಂದು ಧರ್ಮವೆನ್ನುವದಕ್ಕಿಂತ, ಪಾರಮಾರ್ಥಿಕ ವಿಚಾರ, ಸಾಧನೆ, ಆಕಾಂಕ್ಷೆಗಳನ್ನು ವಿಪುಲ ವೈವಿಧ್ಯದಲ್ಲಿಯೂ ಸೂಕ್ಷ್ಮವಾಗಿ ಏಕೀಕರಿಸುವ ಘನ-ಮತವಾಗಿದೆ. ಈ ಸ್ಫುರಣ ಸ್ಪಂದಗಳಿಂದಲೂ, ಕುದಿ ಎಸರುಗಳಿಂದಲೂ, ಮಂಥನದಿಂದಲೂ ಏನುಂಟಾಗುವದಿದೆಯೋ ಮುಂದೆ ನೋಡಬೇಕು. ನವಫಲದಾಯಕವಾದ ಕೆಲವು ಕರ್ಮ ಪ್ರವೃತ್ತಿಗಳು ಈಗ ತಲೆದೋರಿವೆ; ಹಳೆಯ ಆಚಾರ ಪದ್ಧತಿಗಳಿಗೆ ಜೀವ ತುಂಬುವದು, ವೇದ, ವೇದಾಂತ, ಪುರಾಣ, ಯೋಗಗಳಲ್ಲದೆ, ತಂತ್ರಶಾಸ್ತ್ರಗಳ ಅಭ್ಯಾಸ, ಯಥಾ ಪೂರ್ವ ಸ್ಥಿತಿಗೆ ತರುವಿಕೆ, ಸಾಧನೆ, ಶ್ರದ್ಧಾವಲಂಬನೆ ಮೊದಲಾದವು ನಡೆದಿವೆ.

ಇವೆಲ್ಲವೂ, ಒಂದೊಂದೂ ಪೂರ್ಣತಿಳುವಳಿಕೆಗೆ ಬರದಿದ್ದರೂ ಆಚಾರಕ್ಕೂ ವಿಚಾರಕ್ಕೂ ದಿನದ ವ್ಯವಹಾರದಲ್ಲಿಯೂ ಬಳಕೆಗೆ ಬರುವಷ್ಟು ತಿಳುವಳಿಕೆಗೆ ತರುವ ಪ್ರಯತ್ನ ಸಾಗಿದೆ. ಪ್ರಾಚೀನ ತತ್ತ್ವವಿಚಾರಗಳಿಂದಲೂ, ಅವುಗಳ ಪುನರಾನುಭವದಿಂದಲೂ ನೂತನ ಪದ್ಧತಿಗಳು, ಮತ್ತು ತತ್ತ್ವಾರ್ಥ ಪ್ರಪಂಚವು ವಿಕಾಸಗೊಳ್ಳುತ್ತಿವೆ. ಹೊಸೆಯ ಫಲಿತಾಂಶವೇನೇ ಇದ್ದರೂ ನವಭಾರತದ ಅತಿ ಮಹತ್ತ್ವದ ಲಕ್ಷಣವೆಂದು ಧಾರ್ಮಿಕ ಹಾಗು ಆಧ್ಯಾತ್ಮಿಕ ಪ್ರವೃತ್ತಿ ಪರಿಪಾಕಗಳ ಕಡೆಗೆ ಬೊಟ್ಟು ಮಾಡಬಹುದು; ಬೇರೆ ವಿಚಾರ ಕ್ಷೇತ್ರಗಳಲ್ಲಿ, ತೀರ ಮೊನ್ನೆ ಮೊನ್ನಿನ ವರೆಗೆ, ಉತ್ಪಾದಕ ವಿಚಾರಗಳಿಗಿಂತ ವಿಮರ್ಶಕ ವಿಚಾರಗಳೇ ಹೆಚ್ಚಾಗಿವೆ. ಇಲ್ಲಿ ಹಾಗಿಲ್ಲ; ಬಂದ ಪ್ರೇರಣೆಗಳೆಲ್ಲವೂ ಅಖಂಡವಾಗಿ ಅತೀವ ಉತ್ಪಾದಕಗಳಾಗಿವೆ. ವಿಶೇಷವಾಗಿ, ಎಲ್ಲಿ ನೋಡಿದಲ್ಲಿ, ಪ್ರಪಂಚದಲ್ಲಿ ಪರಮಾರ್ಥದ ಬೆಳಕನ್ನು ತರುವ ಪ್ರವೃತ್ತಿ ಕಂಡು ಬರುವದು; ರಾಷ್ಟ್ರದ ನವಜಾತೀಯ ಜೀವನದ ತಳಹದಿಯಾಗಿ ಪರಮಾರ್ಥ ಸಾಧನೆ ಇರಬೇಕೆಂಬ ಪುನರುಚ್ಚರಣೆಯ ಧ್ವನಿಯು ಸುಸ್ಪಷ್ಟವಾಗಿ ಕೇಳಿ ಬರುವದು. ವೈರಾಗ್ಯ ಪಂಥವೂ, ಯತಿ ಮಾರ್ಗವೂ ಕೂಡ ತನ್ನಷ್ಟಕ್ಕೆ ತಾನೆಂದು ಕೇವಲ ಧ್ಯಾನಮಗ್ನವಾಗಿ ಉಳಿಯದೆ, ವಿದ್ಯಾದಾನ, ಧರ್ಮಪ್ರಚಾರ, ಜೀವಕಾರುಣ್ಯ ಕಾರ್ಯಕಗಳಲ್ಲಿ ತೊಡಗಿದೆ. ಮತ್ತು ಈಗೀಗ ವಿಚಾರ ಪ್ರವರ್ತಕರ ಮಾತುಗಳಲ್ಲೆಲ್ಲ ಅಚ್ಚೊತ್ತಿದಂತೆ, ತಿಳಿದು ತಿಳಿದೂ, ಕಂಠೋಕ್ತವಾಗಿ ಜೀವನ ವ್ಯವಹಾರದ ಬಗ್ಗೆ ಒಂದು ಛಲವು ಹಠವು ಬೆಳೆಯುತ್ತಿದೆ. ಮುಂದಿನ ಕಾಲದಬಗ್ಗೆ ಇಂದೇ ಕಾಣುವ ಅರ್ಥಗರ್ಭಿತವಾದ ಚಿಹ್ನವು ಇದೊಂದು. ಭಾರತೀಯ ಪುನರ್ಜನ್ಮದ ಕೀಲವೇ ಇಲ್ಲಿದೆ. ಆಚಾರ ಪದ್ಧತಿಗಳಿಂದ ಬಿಡುಗಡೆಯಾಗಿ ವಿಮುಕ್ತ ಪಾರಮಾರ್ಥಿಕತೆಯಲ್ಲಿ ಮಿಂದು, ಪ್ರಪಂಚವನ್ನೇ ಪಾರಮಾರ್ಥಿಕತೆಯಿಂದ ವ್ಯಾಪಿಸಿಕೊಳ್ಳುವದೇ ಅದರ ಗುಟ್ಟು.

## ಪರಮಾರ್ಥದಲ್ಲಿ ಉತ್ಪಾದಕ ಶಕ್ತಿ ಇನ್ನೂ ಬಂದಿಲ್ಲ

ಆದರೆ ಈ ಪಾರಮಾರ್ಥಿಕತೆಯು ಜೀವನ ವ್ಯಾಪಾರವನ್ನು ವ್ಯವಹರಿಸಲು ಹಾಗು ನಿಯಂತ್ರಿಸಲು ಯಾವ ಪರಮೋತ್ಪಾದಕ ಆದರ್ಶಗಳನ್ನೂ ಯಾವ ನಿಷ್ಕೃಷ್ಟವಾದ ಮಹಾಸಾಧನಗಳನ್ನೂ ಕೈಕೊಳ್ಳಬಹುದೋ ಅದು ಇನ್ನೂ ಮಸಕುಮಸಕಾಗಿದೆ. ಯಾಕೆಂದರೆ, ನವ-ಭಾರತದ ಕಲ್ಪನೆಯು ಉಗಮವೇ ಅಸ್ಪಷ್ಟವಾಗಿ ಅಲ್ಲಿಲ್ಲಾಗುತ್ತಿದೆ. ಧರ್ಮಗಳೂ ಮತಗಳೂ ಪದ್ಧತಿಗಳೂ ಪಾರಮಾರ್ಥಿಕ ಪ್ರಚೋದ-ನೆಯ ಕೇವಲ ಬಹಿರಂಗ ಚಿನ್ಹಗಳು ಮಾತ್ರ; ಮತ್ತು ಮತಧರ್ಮವೆಂದರೆ ತನ್ನ ಅಂತಃಶಕ್ತಿಯನ್ನು ಪಡೆಯಲು ಅದು ನಡೆಸಿದ ಪ್ರವರ್ಧಮಾನವಾದ ಕಾರ್ಯ ಮಾತ್ರ. ಅದರಿಂದ ಪ್ರಪಂಚಕ್ಕೆರಗುವ ವಿಚಾರಗಳಲ್ಲಿಯೂ, ಅದರ ಆದರ್ಶಗಳಿಂದ ತೆರೆಯುವ ದಿಗ್ದಿಗಂತಗಳಲ್ಲಿಯೂ, ಇವುಗಳನ್ನು ಬುದ್ಧಿಯು ಸ್ವೀಕರಿಸಿ, ಪ್ರಾಣವು ಪಚನ ಮಾಡಿಕೊಳ್ಳಲು ಹವಣಿಸುವಾಗ ಅದರ ಪ್ರಸಾರಕ ಸಂಚಲನೆಯು ಕಾಣುವದು. ಪಾರಮಾರ್ಥಿಕ ಜ್ಞಾನಾನುಭವಗಳನ್ನು ಕಾಲುವೆ ತೋಡಿ ಬುದ್ಧಿಗೆ ಹರಿಯಿಸುವ ಕಾರ್ಯವನ್ನು ಹಿಂದುಸ್ಥಾನದ ತತ್ತ್ವಜ್ಞಾನ ಶಾಸ್ತ್ರಗಳು ಮಾಡಿದ್ದರೂ, ನವೀನ ಸೃಷ್ಟಿಕ್ರಮದ ಕಾರ್ಯವನ್ನು ಇನ್ನೂ ಇವು ನಿಶ್ಚ-ಯಿಸಿಲ್ಲ. ತನ್ನ ವಿಚಾರಾಕಾಂಕ್ಷೆಗಳ ಸೀಮಾರೇಖೆಗಳನ್ನು ಅತಿ ವೇಗದಿಂದ ವಿಸ್ತಾರಿಸಿ, ಸುಸ್ಪಷ್ಟಗೊಳಿಸುವ ನವಸಂಕಲ್ಪಕ್ಕಿಂತಲೂ ಗತವೈಭವದ ಪುನರುಚ್ಚರಣೆಯಲ್ಲಿಯೇ ಇವು ಹೆಚ್ಚಾಗಿ ತೊಡಗಿವೆ. ಯುರೋಪ್ಯ ತತ್ತ್ವಜ್ಞಾನಗಳ ಸಂಪರ್ಕದಿಂದ ಉತ್ಪಾದಕ ಪ್ರತಿಕಾರದ ಫಲವೇನೂ ಬಂದಿಲ್ಲ. ಯುರೋಪ್ಯರ ಪೂರ್ವದ ತತ್ತ್ವಜ್ಞಾನಗಳಲ್ಲಿ ಈ ಬಗೆಯ ಉಪಯೋಗವಾಗುವ ಭಾಗವೂ ಇಲ್ಲ ಇದೊಂದು ಕಾರಣ— ಭಾರತದ ಪಾರಮಾರ್ಥಿಕ ಸ್ವಭಾವಕ್ಕೂ ಜಾಯಮಾನಕ್ಕೂ ಒಳ್ಳೇ ಚೆನ್ನಾಗಿ ಸರಿ ಹೋಗುವ ರೀತಿಗಳಲ್ಲಿ ಹೇಳಿದ ಅಗ್ರಿಮ ತತ್ತ್ವವೊಂದೂ

ಕೂಡ ಸಂಸ್ಕೃತ ತತ್ತ್ವಜ್ಞಾನದಲ್ಲಿ ದೊರೆಯದಂತಹವು ಅವರಲ್ಲಿಲ್ಲ ಅದಂತೂ ಸ್ಪೈಯೇ— ಇನ್ನೇನು? ನೀಟ್ಷೆ, ಬರ್ಗಸನ್, ಜೇಮ್ಸ್ ಇವರ ತತ್ತ್ವ-ಸರಣಿಯು ಅಲ್ಲಲ್ಲಿ ಕೆಲವೊಂದು ಜನರಿಗೆ ರಸಾಯನರೂಪವಾಗಿ ಪರಿ-ಣಾಮಿಸಿದ್ದರೂ ಅವರ ಆಶಯವೇ ಬೇರೆ ಕೇವಲ ಪರಿಣಾಮೋಪಯೋಗವಾದಿಯೂ ರಾಜಸಿಕವೂ ಆಗಿರುವುದರಿಂದ ಅದೂ ಕೂಡ ಅವರಿಗೆ ಸ್ವೈಗೆ ಹತ್ತಲಾರದು ಆದರೆ ಪ್ರಧಾನವಾಗಿ ಹೇಳುವುದಾದರೆ, ನಿಜವಾದ ಭಾರತೀಯ ತತ್ತ್ವಜ್ಞಾನವು ಗತಶತಮಾನಗಳ ಧಾರ್ಮಿಕ ಚಳವಳಿಗಳಿಂದುಂಟಾದ ಪಾರಮಾರ್ಥಿಕ ಸಾಧನೆಯ ಫಲವಾಗಿ ಬರಬಹುದಾದ ಅಧ್ಯಾತ್ಮಾನುಭವದಿಂದಲೇ ವಿಕಾಸಗೊಂಡಿತು. ಇದೊಂದಿಲ್ಲದಂತೆ ಕೇವಲ ತಾರ್ಕಿಕ ಬುದ್ಧಿಯಿಂದಾಗಲಿ ವೈಜ್ಞಾನಿಕ ವಿಚಾರದ ಅಥವಾ ಜ್ಞಾನದ ಫಲದಿಂದಾಗಲಿ ಅದು ದೊರೆಯಲಾರದು. ಹತ್ತೊಂಬತ್ತನೆಯ ಶತಮಾನದ ಹಿಂದುಸ್ಥಾನದಲ್ಲಿ ಮೌಲಿಕ ವಿಮರ್ಶೆಯ ವಿಚಾರಶಕ್ತಿ ಸಾಧನೆಯೂ ಸಾಕಷ್ಟು ಇರಲಿಲ್ಲ. ಆ ಮಾತೊಂದಿದ್ದೇ ಇದೆ ಅಭಿನವ ವಿಚಾರಗಳಿಗೆ ಭಾರತೀಯ ರೂಪವನ್ನು ಕೊಡುವುದರಲ್ಲಾಗಲಿ, ಅವುಗಳನ್ನು ಆತ್ಮೀಕರಿಸುವ ಉದ್ಯಮದಲ್ಲಾಗಲಿ, ಶುದ್ಧ ಸಾಹಿತ್ಯವನ್ನು ನಿರ್ಮಿಸುವಲ್ಲಾಗಲಿ ಸ್ವತಂತ್ರ ಬುದ್ಧಿಯುಳ್ಳವರು ತೊಡಗಿದ್ದರು ಈಗೀಗ ಪ್ರಬಲ ವಿಚಾರದ ಪ್ರವಾಹವೊಂದು ಪ್ರಾರಂಭವಾಗಿದ್ದರೂ ಎಲ್ಲವೂ ಇನ್ನೂ ಅನಿಶ್ಚಿತ ಗತಿಯುಳ್ಳದ್ದಾಗಲಿ ಇಲ್ಲವೆ ಆಡಂಬರವುಳ್ಳ-ದ್ದಾದರೂ ಅಸ್ಪಷ್ಟಾಕೃತಿಯುಳ್ಳದ್ದೂ ಆಗಿದೆ.

### ಬಂಗಾಲವೇ ಭಾರತದ ಪ್ರಯೋಗಶಾಲೆ

ಆದರೆ ಅದೇ, ಕಾವ್ಯ, ಸಾಹಿತ್ಯ ವಿಜ್ಞಾನ, ಕಲೆಗಳಲ್ಲಿ ನಿಶ್ಚಿತ ಪ್ರಾರಂಭವು ಆಗಿದೆ. ಉಳಿದ ಎಷ್ಟೋ ವಿಷಯಗಳಂತೆ ಈ ವಿಷಯಗಳಲ್ಲಿಯೂ ಬಂಗಾಲವೇ ಭಾರತ ಶಕ್ತಿಯ ಪರೀಕ್ಷೆಯ ಮೂಸೆಯು ಮತ್ತೂ ಪ್ರಥಮ ಕರ್ಮ ಶಾಲೆಯು. ತನ್ನ ಪ್ರಾಥಮಿಕ ರೂಪಗಳನ್ನೂ

ಪ್ರೇರಣೆಗಳನ್ನು ಅರಳಿಸಿ, ಹೊಸ ಸರ್ಜನ್ಸಿನ ರೀತಿಗಳಿಗೆ ಪೂರ್ಣ ಪ್ರಾಣವನ್ನು ತುಂಬಿ, ಭಾರತ ಶಕ್ತಿಯು ಈ ಪ್ರಾಂತದಲ್ಲಿಯೇ ನೋಡಬೇಕೆಂದು ಮಾಡಿದ್ದಾಳೆ. ಹಿಂದುಸ್ಥಾನದ ಉಳಿದ ಪ್ರಾಂತಗಳಲ್ಲಿ ನವನಿರ್ಮಿತಿಯ ಚಟುವಟಿಕೆಯು ಬೇಕಾದಷ್ಟಿದ್ದರೂ ಪ್ರತಿಭಾವಂತನಾದ ಅಥವಾ ಗಣ್ಯವಾದ ಪಾಂಡಿತ್ಯವುಳ್ಳ ಒಬ್ಬೊಬ್ಬ ಕವಿಯ ಅಥವಾ ಗದ್ಯ ಲೇಖಕನ ಹೆಸರು ಆಗಾಗ ಕೇಳಬರುವದು; ಆದರೆ ಬಂಗಾಲದಲ್ಲಿ ಮಾತ್ರ ಮಹತ್ತ್ವದ ಸಾಹಿತ್ಯವು ಗಣನೆಗೆ ಬರುವಷ್ಟಿದೆ; ಅದರ ಸತ್ತ್ವ ಹಾಗು ಸಂಸ್ಕೃತಿಗೂ ಒಳ್ಳೆಯ ಪ್ರತಿಷ್ಠೆ ಬಂದಿರುವದಲ್ಲದೆ ಕಾಲಕಾಲಕ್ಕೂ ಅದು ವರ್ಧಮಾನವಾಗಿದೆ. ಅಲ್ಲಿಯ ವಿಪುಲ ಚಿತ್ರಕಲೆಯು ಸ್ವಯಂ ಪ್ರೇರಣೆಯುಳ್ಳದ್ದು, ಸ್ಫೂರ್ತಿತವೂ ಆಗಿದ್ದು ಸುಕುಮಾರ ಸೌಂದರ್ಯದಿಂದಲೂ ದಿವ್ಯದರ್ಶನ ಶಕ್ತಿಯಿಂದಲೂ ಒಡಗೂಡಿದೆ. ಪ್ರಖ್ಯಾತರಾದ ಇಬ್ಬರು ವೈಜ್ಞಾನಿಕರು ಅಲ್ಲಿರುವರು; ಅವರಲ್ಲೊಬ್ಬರು ಮುಖ್ಯವಾದ ಹಾಗು ಇನ್ನೂ ಫಲದಾಯಕವಾಗಬಹುದಾದ ಶೋಧವೊಂದನ್ನು ಮಾಡಿ ಜಗತ್ ಪ್ರಖ್ಯಾತರಾಗಿರುವರು. ಇದಲ್ಲದೆ, ಜಗತ್ತಿನ ವಿಜ್ಞಾನೇತಿಹಾಸದಲ್ಲಿ ಹೆಸರು ಪಡೆಯಬಹುದಾದಂಥ ಸಂಶೋಧನಾನಿಪುಣರ ತರುಣ ಶಾಖೆಯೊಂದು ಇದ್ದೇ ಇದೆ. ಹಿಂದುಸ್ಥಾನದ ಮನವು ಯಾವ ದಿಕ್ಕಿಗೆ ಹೊರಳಬಹುದು, ಭಾರತೀಯ ಚಿತ್ತದ ಒಲವೆತ್ತ ಎಂಬುದು ಇಲ್ಲಿ ತಿಳಿಯುವದು. ಟಾಗೋರರ ಕಾವ್ಯಕ್ಕಿಂತ ಬಂಕಿಮರ ಗದ್ಯಕ್ಕಿಂತ ಬಂಗಾಲಿ ಚಿತ್ರಕಾರರ ಕಲೆಯು ಬಹಳೇ ಅರ್ಥ ಪೂರ್ಣವಾಗಿದೆ. ಬಂಗಾಲಿ ಕಾವ್ಯವು ಇನ್ನೂ ತನ್ನ ಹಾದಿಯಲ್ಲಿ ತಡವರಿಸುತ್ತ ನೆಲೆಮೊರೆಯದವರಂತೆ ಹುಡುಕಾಡುವದರಲ್ಲಿಯೇ ಇರುವದಾದರೂ ಬಂಗಾಲಿ ಚಿತ್ರಕಲೆ ಮಾತ್ರ ತಾತ್ಕಾಲಿಕವಾದ ಅಂತಃಪ್ರೇರಣೆಯಿಂದಲೋ ಏನೋ ಎನ್ನುವಂತೆ ಇಟ್ಟ ಮೊದಲ ಹೆಜ್ಜೆಯೇ ಸರಿಯಾದ ಹಾದಿಗೆ ಬಿದ್ದಿದೆ.

## ನವಜಾಗೃತಿಯ ಹಿರಿಕಿರುಹು ನೂತನ ಚಿತ್ರಕಲೆಯಲ್ಲಿ

ಇದರ ಕಾರಣವು ಕೆಲಮಟ್ಟಿಗಾದರೂ ಹೀಗಿವೆ:— ನವಸಾಹಿತ್ಯ ಪ್ರಾರಂಭವಾದ ಕಾಲವು ಪರಕೀಯ ಪ್ರಭಾವದ ಕಾಲವು; ಅನಿಶ್ಚಯದ ತಡವರಿಕೆಯ ಕಾಲವು. ಆ ಕಾಲಕ್ಕೆ ಚಿತ್ರಕಲೆಯು ಮುಗ್ಧವಾಗಿತ್ತು; (ಮಧ್ಯೇ, ರವಿವರ್ಮನ ಆಭಂಡ ಗೊದ್ದಾಟವೊಂದು ಆಯಿತಾದರೂ, ಅದರ ಬೀಜವಿಹೀನ ದೌರ್ಬಲ್ಯದಿಂದ ಅದು ಬಂದು ಬಂಜೆತನದಲ್ಲಿಯೇ ಕೊನೆಗಾಣುವದು ಗೊತ್ತೇ ಇತ್ತು.) ಕೆಲ ದಿನ ಸ್ವಯಂ ಪ್ರಜ್ಞೆಯ ಸಂಪಾದನೆಯಲ್ಲಿ ಕಾಲಕಳೆದುದರಿಂದ ಜ್ಞಾನಜ್ಯೋತಿಯ ಸ್ಪಷ್ಟ ಪ್ರಕಾಶದ ಲಾಭವೂ ಅದಕ್ಕಾಯಿತು. ಇನ್ನೊಂದು ಮಾತಿದೆ. ಸಾಹಿತ್ಯದ ಶೈಲಿಯೂ ವಿಚಾರವೂ ವಿವಿಧ ವಿಪಾಕವುಳ್ಳವುಗಳಾಗಿರುವವು. ರೂಪ ಪ್ರಧಾನ ಕಲೆಗಳ ಮಾತೇ ಬೇರೆ. ಅದರ ಸೀಮೆ ಸಣ್ಣದು, ಅದರ ತಂತ್ರೋಪದೇಶಗಳು ತೀಕ್ಷ್ಣವಾದ ಕಿರಿದಾದ ಮಾರ್ಗದಿಂದ ತಮ್ಮ ಸೂಚನೆಗಳನ್ನು ಹೆಚ್ಚು ಸ್ಪಷ್ಟವಾಗಿ ಮೂಡಿಸಬಲ್ಲವು. ಬಂಗಾಲೀ ಚಿತ್ರಕಾರರ ಸರ್ವ ಶಕ್ತಿಯೇ ಬಾಹ್ಯರೂಪ ಮತ್ತು ವಾಚ್ಯಾರ್ಥಗಳಿಗಿಂತ ವಸ್ತುಜಾತದ ಗರ್ಭಿತಾರ್ಥ ಮತ್ತು ಅಂತರಂಗವನ್ನಷ್ಟೇ ತೋರಿಸುವ ಉದ್ದೇಶದಿಂದಲೇ ಸಂಕಲ್ಪ ಪೂರ್ವಕವಾಗಿ ಕಾರ್ಯರಂಗಕ್ಕಿಳಿದಿತು. ಅದು ಸಹಜ ಜ್ಞಾನದಿಂದ ಹುಟ್ಟಿ, ಅದರ ಸಹಜ ಛಂದಗಳಲ್ಲಿಯೇ ರೂಪುಗೊಳ್ಳುವದು; ಬುದ್ಧಿಯ ಅವಲೋಕನಕ್ಕೆ ಗೋಚರವಾಗುವ ಶಾಸ್ತ್ರೀಯ ರೂಪಾಕೃತಿಗಳಿಗೆ ಅದು ಎಂದೂ ಅಧೀನವಾಗಿಲ್ಲ. ಬಹಿರಂಗದಲ್ಲಿ ಅಡಗಿಹೋದ ಅಂತರಂಗದ ಆಂತರಿಕ ಜೀವನದ ಗೆರೆ-ಬಣ್ಣಗಳನ್ನೂ, ಮೂರ್ತಿ-ಭಂಗಿಗಳನ್ನೂ ಹೊರಗಿನ ಪ್ರಕೃತಿಯಿಂದಲೂ ಪ್ರಪಂಚದಿಂದಲೂ ತಂದ ಸಾಮಗ್ರಿ ಸಾಹಿತ್ಯಗಳಿಂದ ಅದು ಮೂಡಿಸುವದು. ಭಾರತೀಯ ಚಿತ್ರಕಲೆಯ ಚಿರಂತನೋದ್ದೇಶವೇ ಇದು. ವಿಚಾರಪ್ರಚುರತೆ, ಪೌರಾಣಿಕ ಕಥಾವಲಂಬನ, ರೂಪಕ ಪ್ರಾಧಾನ್ಯತೆಗಳು ಈಗಿನ

ಕಲೆಯಲ್ಲಿ ಕಡಿಮೆ; ಆದರ ಪ್ರಯೋಗದ ರೀತಿ ಹೊಸದಾಗಿದೆ. ಸಾಕ್ಷಾತ್ ವಿಷಯಗಳಿಂದ, ಸೂಕ್ಷ್ಮವಾಗಿ ದಿನದನುಭವಕ್ಕೆ ಬರುವಂತೆ ಆದರೂ ನಯವಾದ ವ್ಯಂಜನಾ ಸಾಮರ್ಥ್ಯದಿಂದ ಕೂಡಿದ ರೀತಿಯು ಅದರದು. ಈ ಕಲೆಯು ನಿಜವಾಗಿ ನವಸೃಷ್ಟಿಯೇ ಸರಿ. ಈ ರೀತಿಯಾಗಿ ತೆರೆದಂಥ ಹೆಬ್ಬಾಗಿಲೊಳಗಿಂದ ಹಾಯ್ದು ಉಳಿದ ಪ್ರಾಂತದೊಳಗಿನ ಕಲಾಪ್ರಾವಿಣ್ಯವೂ ತಂತಮ್ಮ ಲಕ್ಷಣಗಳಿಂದ ಕೂಡಿಕೊಂಡು ಬೇರೆ ಕಲಾಶೈಲಿಗಳನ್ನು ಹುಡುಕಿಕೊಂಡೀತೆಂದು ನಾವು ಆಶಿಸಬಹುದು. ರಾಷ್ಟ್ರಜಾತೀಯತೆಯ ಸೂತ್ರದಲ್ಲಿ ಪ್ರವಣಿಸಿದ್ದರೂ ಪ್ರಾಂತಿಕ ವೈಲಕ್ಷಣ್ಯಗಳಿಂದೊಡಗೂಡಿದ ಭಾರತ ರೂಪ ವೈಭವವು ಅಪಾರವಾಗಿದೆ. ಅದನ್ನು ನಾವು ಅದರ ಕಲಾಸೃಷ್ಟಿಯ ಭರತದ ಕಾಲದಲ್ಲಿ ಮೂರ್ತಿತವಾಗಿದ್ದನ್ನು ಕಾಣಬಹುದು.

**ವಂಗೀಯ: ನವಸಾಹಿತ್ಯದ ಮೊದಲ ಹೆಜ್ಜೆ**

ಬಂಗಾಲದೊಳಗಿನ ಕಾವ್ಯ ಹಾಗು ಸಾಹಿತ್ಯವು ಎರಡು ಅವಸ್ಥೆಗಳೊಳಗಿಂದ ಹಾಯ್ದು ಮೂರನೆಯ ಸ್ಥಿತ್ಯಂತರದ ಸಿದ್ಧತೆಯಲ್ಲಿದೆ. ಅದರ ಲಕ್ಷಣವು ಸ್ಪಷ್ಟವಾಗಿ ಮುಂಗಂಡು ಬರದು. ಪ್ರಾರಂಭವೇನೋ, ಇರೋಪಿಯನ ಮತ್ತು ಬಹಳಷ್ಟು ಇಂಗ್ಲಂಡಿನ ಪ್ರಭಾವದ ನೂತನ ಗದ್ಯಪದ್ಯ ರೂಪಗಳು, ಸಾಹಿತ್ಯಿಕ ವಿಚಾರಗಳು ಕಲಾಸಮಯಗಳು ಇವುಗಳಿಂದಲಾಯಿತು. ಆ ಕಾಲಕ್ಕೆ ಅನೇಕಾನೇಕ ಕೃತಿಗಳು ಚುರುಕು ಉಲ್ಲಾಸಗಳಿಂದ ನೆರೆಯಾಗಿ ಬಂದವು. ಒಬ್ಬಿಬ್ಬರು ಪ್ರತಿಭಾವಂತರು, ಉಳಿದವರು ಸೊಗಸಾದ ಕಾವ್ಯಶಕ್ತಿಯುಳ್ಳವರು, ಅಂತೂ ಅನೇಕ ಕವಿಕವಿಯಿತ್ರಿಯರ ಚಂದವಾದ ಮತ್ತು ಸಲಕ್ಷಣವಾದ ಕಾವ್ಯಗಳಿಂದ ಸರಸ್ವತಿಯು ಮೇರೆವರಿಯಿತು. ಕೃತಿಗಳಾವವೂ ಎಬಡ-ತಬಡ ಅನುಕರಣದಿಂದ ಬಂದಿರಲಿಲ್ಲ. ಪರಕೀಯ ಪ್ರಭಾವವೇನೋ ಎಲ್ಲ ಕಡೆಗೂ ತಲೆದೋರಿದ್ದರೂ ಸಾಹಿತ್ಯದಲ್ಲಿ ಅದನ್ನು ಜೀರ್ಣಿಸಿಕೊಂಡ ಚಿನ್ಹವಿತ್ತು, ಬರಿಯ 'ಮಕ್ಷಿಕಾಮಕ್ಷಿ'ಯಾಗಲಿ ಮರ್ಕಟಾನುಕರಣವಾಗಲಿ

ಇರಲಿಲ್ಲ. ಬಂಗಾಲೀ ಜನರ ಸ್ವಭಾವದ ಜಾತಿಲಕ್ಷಣವೂ ಅವರ ಹುಟ್ಟು ರಸಿಕತೆಯ ಒಲವೂ ತನ್ನ ಸತ್ತ್ವಕ್ಕೆ ತಕ್ಕ ಶೈಲಿಯ ಎರಕವಲ್ಲಿ ಪರಪ್ರಭಾವಗಳನ್ನು ಕರಗಿಸಿ ಹೊಯ್ದುಕೊಂಡವು. ಅವರೂ ಅವರೊಳಗಿನ ವಿಷಯ ಸಾರವು ಇಲ್ಲಿಯ ಜೀವಕ್ಕೆ ಸಹಜವಲ್ಲವಾಗಿರುವುದರಿಂದ ಅವೆಲ್ಲವೂ ಜೊಳ್ಳುಜೊಳ್ಳಾಗಿ ಭಾಸವಾಗುವವು. ಅವರ ರೂಪ ಚರ್ಯೆಗಳಲ್ಲಿ ಬಂಗಾಲೀ ಕಾವ್ಯದ ಮೊದಲಿಂದಲೂ ಸಂಪಾದಿಸಿಕೊಂಡು ಬಂದ ವಿಶೇಷ ಕಳೆಯೂ ನಯನಾಜೂಕುಗಳುಳ್ಳ ಚೆಲುವಲಿಕೆಯೂ ಇದ್ದುವಾದರೂ ಹೇಳ್ವೆಲ್ಲವನ್ನೂ ಒಟ್ಟು ನೋಡಿದರೆ ಹುರುಳೇ ಬಹಳ ಹೊರಡುವದಿಲ್ಲ. ಕವಿಯು ತನ್ನ ಸ್ವಯಂ-ಸಿದ್ಧ ಶಕ್ತಿಯಿಂದ ಬರೆದ ಕೃತಿಗಳಿಂದಪೇಕ್ಷಿಸುವ ಘನತೆಯೂ ಅಲ್ಲಲ್ಲಿ ವಿಚಾರ ಹಾಗು ಪ್ರಕಾರಗಳನ್ನು ಅಭ್ಯಸಿಸುವಂತೆ ತಿದ್ದಿ ಬರೆಯುತ್ತಿರುವ ರೀತಿಯಲ್ಲಿ ತೋರಿ ಬರದು. ಯಾಕೆಂದರೆ, ಅದರಲ್ಲಿ ಅವನ ವಿಚಾರವಾಗಲಿ ನಿರ್ಮಾಣ ಸ್ವಾತಂತ್ರ್ಯವಾಗಲಿ ಇರುವದೇ ಇಲ್ಲ.

## ಬಂಕಿಮಚಂದ್ರರು ಮತ್ತು ರವಿಂದ್ರನಾಥ ಟಾಗೋರರ ಸಾಹಿತ್ಯ

ಆ ಕಾಲವು ತೀರಿ ಬಹಳ ದಿನಗಳಾದವು; ಅದು ತನ್ನ ಆಯುರ್ಬಲವಿದ್ದಷ್ಟು ಬಾಳಿ ಸಾಹಿತ್ಯ ಸಂಸ್ಕಾರದಲ್ಲಿ ಲೀನವಾಗಿ ಹೋಯಿತು. ಆ ಯುಗದ ಸಾಹಿತ್ಯ ಬ್ರಹ್ಮರು ಇಬ್ಬರಾದರು ; ಅವರಲ್ಲೊಬ್ಬನು ದೈವದತ್ತವಾದ ನಿರ್ದುಷ್ಟ ಕೌಶಲ್ಯದಿಂದಲೂ ಹೊಸ ಜಾತಿಯ ಮನೋವೃತ್ತಿಯಿಂದಲೂ ಕೂಡಿದವನಾದುದರಿಂದ ಬಂಗಾಲಿಯ ಗದ್ಯಶೈಲಿಗೆ ರಾಜದೀಕ್ಷೆಯನ್ನು ಕೊಟ್ಟನು; ಇನ್ನೊಬ್ಬನು ಅಲ್ಲಿಯ ಕಾಂತಿಮಯ ಸಾಹಿತ್ಯನಿರ್ಮಿತಿಯ ಸಂಧ್ಯಾಸಮಯದಲ್ಲಿ ಹುಟ್ಟಿದವನಾದರೂ ಆ ಕಾಲವನ್ನು ಮಿಕ್ಕಿಬಾಳಿ, ವಂಗದೇಶದ ವಿಮುಕ್ತಾತ್ಮವನ್ನೇ ಪ್ರಕಾಶಗೊಳಿಸುವ ಗಂಭೀರ ಧ್ವನಿಯಲ್ಲಿ ಬೇರೊಂದು ರಾಗವೆತ್ತಿ ಕಾವ್ಯಕಲಾಪನೆ ಮಾಡಿದನು. ಬಂಕಿಮಚಂದ್ರರ ಗ್ರಂಥಗಳು ಗತಕಾಲದ ಮಾತಾದವು;

ಬೇರೆ ಯಾವ ಸಾಹಿತ್ಯ ಪ್ರಭಾವವೂ ರೂಪಿಸಿರಲಾರದಷ್ಟು ರೀತಿಯಲ್ಲಿ ಬಂಗಾಲದ ನವೀನ ಚಿತ್ರವನ್ನು ಅವು ಒಳಹೊಕ್ಕು ರೂಪುಗೊಟ್ಟಿವೆ; ರವೀಂದ್ರರ ಕೃತಿಗಳಿನ್ನೂ ವರ್ತಮಾನ ಕಾಲದ ಮೇಲೆ ಪ್ರಭುತ್ವವನ್ನು ನಡೆಸಿವೆಯಾದರೂ ಅವಕ್ಕೂ ಮಿಗಿಲಾಗುವ ಶಕ್ತಿಗಳು ಬರಲು ಭವಿಷ್ಯದ ಬಾಗಿಲುಗಳನ್ನು ಅವು ತೆರೆದಿವೆ. ಹೊಸ ರೂಪದಲ್ಲಿದ್ದರೂ ಭಾರತೀಯ ವೃತ್ತಿಯನ್ನೇ ಇಬ್ಬರೂ ಹೆಚ್ಚಾಗಿ ಅವಲಂಬಿಸಿರುವರು. ಇಬ್ಬರದೂ ಯುಗದ ಪ್ರಭಾತದ ಕೂಗು: ಗಣಸಾಟಕ್ಕಿಂತ ಹುಡುಕಾಟವು ಹೆಚ್ಚು, ಆವಾಹನ ಸಾಮರ್ಥ್ಯಕ್ಕಿಂತ ವ್ಯಂಜನೆ ಪ್ರಾರ್ಥನೆಗಳೇ ಬಹಳ. ಸದ್ಯಕ್ಕೆ, ಒಂದು ಕಡೆಗೆ, ರವೀಂದ್ರ ಪ್ರಭಾವವನ್ನೇ ಹಿಗ್ಗಿಸಿ ಅಗಲಿಸಿ ವಿಕಾಸಗೊಳಿಸುವ ಹೊಸ ಸಿದ್ಧತೆ ಕಾಣುವದು; ಇನ್ನೊಂದು ಕಡೆಗೆ ಅದರ ವಿರುದ್ಧ ಬಂಡಾಯ ಹೂಡಿ, ಕೃತಿಯಲ್ಲಿಯೂ ಸ್ಫೂರ್ತಿಯಲ್ಲಿಯೂ ಸ್ಫುಟವಾದ ರಾಷ್ಟ್ರಮುದ್ರೆಯುಳ್ಳ ಸಾಹಿತ್ಯವು ಬೇಕೆಂಬ ಛಲದ ಚಲನವಲನವು ತೋರುತ್ತಿದೆ. ಆದರೆ ಇದರ ಫಲವೇನೋ ಇನ್ನೂ ಸ್ಪಷ್ಟವಿಲ್ಲ. ಒಟ್ಟಿನಲ್ಲಿ, ಈ ಚಳವಳಿಯೂ ಕೂಡ ನವೀನ ಚಿತ್ರಕಲಾ ಸಾಂಪ್ರದಾಯದಂತೆಯೇ ಹಾದಿಹಿಡಿದರೂ ಶಬ್ದಾರ್ಥ ಸಹಜವಾದ ಸ್ಫುಟತೆಯು ಇದರ ಹದಗೊಂಡ ವೈಖರಿಯಲ್ಲಿಯೂ ವಿವಿಧ ವಿಭಾವದಲ್ಲಿಯೂ ಇದೆ. ತನ್ನ ಪ್ರಭಾವದ ಮುದ್ರೆಯೊತ್ತಿಬಿಡುವ ಶೈಲಿಯನ್ನು ಹುಟ್ಟಿಸುವ ಪ್ರಥಮ ಶ್ರೇಣಿಗೆ ಸೇರುವ ಪ್ರಾಸಾದಿಕ ಕವಿತ್ವದ ವೈಖರಿಯು ಇನ್ನೂ ಎಲ್ಲಿಯೂ ಜನ ಮನಃ ಶ್ರುಂತಿಯನ್ನು ಹಿಡಿದು ಬಿಟ್ಟಿಲ್ಲ. ಆದರೂ ಈ ಮಧ್ಯಮ ಧ್ವನಿಗಳಲ್ಲಿಯೇ ನವಭಾರತದಚ್ಚಿನ ಪ್ರತಿಭಾಪೂರ್ಣ ಅಂತಃಸ್ಫೂರ್ತಿಯ ಸಾಹಿತ್ಯದ ಅಸ್ಪಷ್ಟ ಲಕ್ಷಣಗಳು ದೃಶ್ಯಮಾನವಾಗುತ್ತಿವೆ.

**ಹೊರಮಾತುಗಳಲ್ಲಿ ಅನಿಶ್ಚಿತ ಸ್ಥಿತಿ**

ಮನಸ್ಸಿನ ಕೆಲಮಾತುಗಳಲ್ಲಿ— ಎಷ್ಟೇ ಚಿಕ್ಕ ಸೀಮೆಯೊಳಗೆಯೇ ಇರಲಿ— ತುಸು ಮಟ್ಟಿಗೆ ನಿಶ್ಚಿತ ರೂಪದ ಹಾಗು ಸಾಫಲಕ್ಕೆ ಸಾಗುವ ಪ್ರಾರಂಭವಾಗಿದೆ. ಆದರೆ ರಾಷ್ಟ್ರದ ಬಹಿರಂಗ ವ್ಯವಹಾರದಲ್ಲಿ ಮಾತ್ರ ನಾವು ಇನ್ನೂ ಎಷ್ಟೋ ಗೊಂದಲ ಅನಿಶ್ಚಯಗಳ ಅವಸ್ಥೆಯಲ್ಲಿದ್ದೇವೆ. ಬಹಳ ಮಟ್ಟಿಗೆ ಇದರ ಕಾರಣವೇನೆಂದರೆ—ತತ್ತ್ವತಃ ಹಿಂದಿನ ಕಾಲದ ರಾಜಕೀಯ ಪರಿಸ್ಥಿತಿಯು ಇಂದೆ ಉಳಿದಿಲ್ಲ, ಮುಂದೆ ಬೇಕಾದದ್ದು ಇನ್ನೂ ಹುಟ್ಟಿಲ್ಲ. ರಾಷ್ಟ್ರೀಯ ಜೀವನದ ನವಜನ್ಮಕ್ಕೆ ಬೇಕಾದ ಗಟ್ಟಿಪಿಂಡವು ಬೆಳೆದು ಬರಬೇಕಾದರೆ ಆಕಾಂಕ್ಷೆಗಳ ತೀವ್ರತೆಯು ಪರಿಕಿತದಿಂದುಂಟಾದ ಧಾನತಿಯೂ ತಾಪವೂ ಅನುಕೂಲವಲ್ಲ. ಇನ್ನೇನು— ಇಷ್ಟು ಮಾತ್ರ ಸ್ಪಷ್ಟವಾಗಿದೆ:— ಐರೋಪ್ಯ ರಾಜಕೀಯ ವಿಚಾರ ಪದ್ಧತಿಗಳ ಮರ್ಕಟಾನುಕರಣವೂ ಅರೆವಾಸಿ ಅರಗಿಸಿ ಕೊಳ್ಳುವ ಆಸೆಬುರುಕತನವೂ ಪ್ರಧಾನವಾಗಿದ್ದ ಪ್ರಥಮ ಯುಗವು ಸಮಾಪ್ತವಾಗಿದೆ. ಹೋದ ಹತ್ತು ವರ್ಷಗಳ ಚಟವಟಿಕೆಯು ಆಘಾತ ಪ್ರತ್ಯಾಘಾತಗಳಿಂದ ಉದ್ದೇಶದಲ್ಲಿ ವಿಪರೀತ ರಾಷ್ಟ್ರೀಯ ವೃತ್ತಿಯುಳ್ಳ ರಾಜಕೀಯ ಪ್ರವೃತ್ತಿಯೊಂದು ಎಚ್ಚತ್ತಿದೆ. ಅದು ಭಾರತೀಯ ಚಿತ್ತಕ್ಕೆ ಸಹಜವಾದ ಪ್ರೇರಣೆಗಳಲ್ಲಿಯೂ ಪಾರಮಾರ್ಥಿಕ ತತ್ತ್ವಗಳಲ್ಲಿಯೂ ಪ್ರಜಾಮತವಾದದ ಕಲ್ಪನೆಯನ್ನು ನೆಲೆಯೂರಿಸಿಲ್ಲಿಸಲಿಕ್ಕೆಂದು ನಾಡೆಂದರೆ 'ತಾಯಿ, ಆದಿಶಕ್ತಿ' ಎಂಬ ಉಪಾಸನಾ ಮಾರ್ಗವನ್ನು ಪ್ರಕಟಿಸಿತು; ಪ್ರಾಚೀನ ಧರ್ಮ ಹಾಗು ತತ್ತ್ವಜ್ಞಾನಗಳ ಕಲ್ಪನೆಗಳನ್ನು ರಾಜಕಾರಣದಲ್ಲಿ ಪ್ರಯೋಗಿಸಿತು; ದೇಶಭಕ್ತಿಯನ್ನೇ ಧರ್ಮವೆಂದು ಉದ್ಘೋಷಿಸಿತು. ಆತ್ಮಾವಿಷ್ಕರಣ ವಿಧಾನದಲ್ಲಿ ಅದು ಮತ್ತೆಮತ್ತೆ ಒರಟೊರಟಾಗಿಯೂ, ಅನಿಶ್ಚಿತವಾಗಿಯೂ ಇದ್ದು ಭೂತವರ್ತಮಾನ ಪರಿಸ್ಥಿತಿಯ ವಿರುದ್ಧ ಬಂಡು ಹೂಡಿ ಸಂಘಟನೆ ನಡಿಸಿದರೂ, ವಿಧಾಯಕ ಕಾರ್ಯಕ್ರಮ

ಪದ್ಧತಿಯನ್ನು ತಾತ್ಕಾಲ ಜಯ ಹೊಂದುವಂತೆ ಮುಂದುವರಿಸಲು ಅವಕ್ಕೆ ಸಾಧ್ಯವಾಗದಿದ್ದರೂ, ರಾಜಕೀಯ ವಿಚಾರಾಚಾರಗಳಿಗೆ ಗಟ್ಟಿ ಹುರಿಹಾಕಿ ಜನರನ್ನು ಖಂಡಿತವಾಗಿ ಎಚ್ಚರಗೊಳಿಸಿತು; ಇವರ ಫಲ ನಿಷ್ಪತ್ತಿ ಮಾತ್ರ, ರಾಷ್ಟ್ರವು ಸ್ವವಿಕಾಸ ನಿರ್ಣಯ ಪಡಿಸುವ ಬಲ-ವನ್ನು ಸಾಕಷ್ಟು ಗಳಿಸಿದ ಮೇಲೆ, ಅವಕ್ಕೆ ಬೇಕಾದ ಇಚ್ಛಾಶಕ್ತಿಯನ್ನು ಪಡೆದ ಮೇಲೆ ಕಾಣಬಹುದು.

### ಸಮಾಜ ಪುರುಷನ ಪೂರ್ಣತೆಗೆ ಇನ್ನೂ ಕಾಲಬೇಕು

ಭಾರತೀಯ ಸಮಾಜವಿನ್ನೂ ತೀರ ಗಲಿಬಿಲಿಯ ಸ್ಥಿತಿಯಲ್ಲಿದೆ. ಹಳೆಯ ಸಂಘಗಳು ಸುತ್ತಲಿನ ಪರಿಸ್ಥಿತಿಯ ಹೊಡೆತಕ್ಕೆ ಕುಸಿಬೀಳುತ್ತಿವೆ; ಅದರ ನಿಜರೂಪವೂ ಸತ್ತ್ವವೂ ಅದನ್ನು ತೊಲಗಿ ಹೋಗುತ್ತಲಿವೆ; ಆದರೆ ವಿಚಾರ ಹಾಗು ಕ್ರಿಯಾಶಕ್ತಿಗಳ ಜಾಡ್ಯದಭ್ಯಾಸ ಬಲದಿಂದ ಅವರ ಮುಖರೂಪವು ಬಹಳ ದಿನಗಳ ಸಾಹಚರ್ಯದಿಂದಲೂ ಅವ-ರೊಡನಿರುವ ಆಸಕ್ತಿಯಿಂದಲೂ ಉಳಿದಿರುವವು. ಹೊಸದಿನ್ನೂ ಹುಟ್ಟುವ ಶಕ್ತಿತಾಳಿಲ್ಲ. ತಾಳಿಕೆ ಬರುವ ಪುನರ್ರಚನೆಯ ಸಂಭವವಿನ್ನೂ ತೋರುವದಿಲ್ಲ. ಎಷ್ಟೋ ಮಟ್ಟಿಗೆ ಹಳೆಯದು ಹಾಳಾಗುವ ಕ್ರಿಯೆಯೇ ಸಾವಕಾಶವಾಗಿಯೂ ಸೂಕ್ಷ್ಮವಾಗಿಯೂ ಸಾಗಿದೆ; ಹಳೆಯದುಳಿದಿರುವದು ಒಳಗಿಂದ ಕೊಳೆತರೂ ಹೊರಹೊರಗೆ ಇದ್ದಂತೆ ತೋರುವ ಹೆಣದ ರೀತಿಯಲ್ಲಿಯೇ ಸರಿ. ಕೆಲವು ಸುಧಾರಕ 'ಸಮಾಜ' † ಗಳು ಧರ್ಮದ ಬೆಂಬಲವಿದ್ದಲ್ಲಿ ಮಾತ್ರ ದೊಡ್ಡ ಉದ್ಘೋಷಣೆಯಿಂದ ತಮ್ಮ ಸಮಾಜ ಸುಧಾರಣೆಯ ಕಾರ್ಯಗಳನ್ನು ಪಾಶ್ಚಾತ್ಯ ಉದಾಹರಣೆ ಮೇಲುಪಂಕ್ತಿಗಳಿಗೆ ಬೊಟ್ಟು ಮಾಡಿಯೇ ಹಳೆಗಾಲದ ಪಡಿಕಟ್ಟು ಅಥವಾ ಜಾಯಮಾನಗಳನ್ನೆತ್ತಿ ತೋರಿಸಿಯೇ

† ಆರ್ಯ ಸಮಾಜ, ಬ್ರಹ್ಮೋ ಸಮಾಜ, ಪ್ರಾರ್ಥನಾ ಸಮಾಜದಂಥವು.

ಮುಂದರಿಸವು. ಆದರೆ ಅವುಗಳಲ್ಲಿ, ಮೇಲೆ ಹೇಳಿದ ಅಪವಾದಗಳನ್ನು ಬಿಟ್ಟರೆ, ಪರಿಪುಷ್ಟವಾದ ಪ್ರಾಮಾಣಿಕತೆ ಇಲ್ಲದ್ದರಿಂದ ಜನರ ಅಂತಃ ಕರಣಗಳನ್ನು ಅವು ಹಿಡಿಯಲೇ ಇಲ್ಲ. ಜೀವನದ ಮಹಾ ಶಕ್ತಿ ಸಂಘಟನೆಗಳ ಸಂಸ್ಪರ್ಶವಾಗಲಿ, ಪ್ರೇರಣೆಯ ಗಾಂಭೀರ್ಯವಾಗಲೀ ಇರುವದಕ್ಕಿಂತ ಹೆಚ್ಚಾಗಿ ಪಾಂಡಿತ್ಯ ಭಾವನಾವಶತೆಯಿಂದ ಕೂಡಿದ ಪೌರಾಣಿಕ ಸಾಂಪ್ರದಾಯಿಕತ್ವದ ಪುನರುಜ್ಜೀವನದ ತೆರೆಯೂ ಒಂದು ಹಾಯ್ದು ಹೋಯಿತು. ತನ್ನ ಸಂಸ್ಕೃತಿಯ ಆಂತರಿಕ ಧ್ವನಿತಾರ್ಥವನ್ನನುಲಕ್ಷಿಸಿ ರಾಷ್ಟ್ರಶಕ್ತಿಯು ಜಾಗೃತಿ ಹೊಂದಿ ಆಚಾರ ಪದ್ಧತಿಗಳೂ ಸಮಾಜ ವ್ಯವಹಾರದ ವಿಚಾರಗಳೂ ಹೊಸ ರೂಪ ಹೊಂದಿ ಬರಬೇಕೆಂಬ ಅಭಿಪ್ರಾಯವು ದಿನಾಲು ಬೆಳೆಯುತ್ತಲೇ ಇದೆ; ಆದರೆ ಅದನ್ನು ಕೈಗೂಡಿಸುವ ಸಾಧನೆಯಾಗಲಿ ತಕ್ಕಷ್ಟು ಇಚ್ಛಾ ಶಕ್ತಿಯಾಗಲಿ ಇನ್ನೂ ಬಂದಿಲ್ಲ. ಅಧಿಕ ಸ್ವಾತಂತ್ರ್ಯವನ್ನು ಪಡೆದ ರಾಷ್ಟ್ರೀಯ ಜೀವನವಾರಂಭವಾಗುತ್ತಲೇ ಜಾಗೃತವಾದ ಜನದ ಸಾಮಾಜಿಕ ಮನಃ ಕ್ರಿಯೆಗಳನ್ನು ನವಜನ್ಮದ ಶಕ್ತಿಗಳು ಅಮರಿ ಹಿಡಿಯಬಹುದೆಂದು ಮಾತ್ರ ತೋರುವದು.

—— ——

# ನಾಲ್ಕನೆಯ ಪ್ರಕರಣ

**ಪರಮಾರ್ಥ ನಿಯತತತ್ತ್ವವಾದ ನವಜನ್ಮವೆಂದರೇನು?**

ನವಜನ್ಮವು ಹೀಗೆ ನಿರ್ಧಾರಿತವಾಗುತ್ತಲಿದ್ದರೂ ಇನ್ನೂ ಕೊನೆಗೂಡುವ ನಿಷ್ಕರ್ಷಕ್ಕೆ ಬಂದಿಲ್ಲ. ಆದರೆ ಅದು ತನ್ನ ಹೆಸರಿಗೆ ಅನ್ವರ್ಥಕವಾಗಿ ಭಾರತ ಶಕ್ತಿಯ ಪ್ರಾಣವು ನೂತನ ದೇಹವನ್ನು ಪಡೆದು ಪುನರ್ಜನ್ಮ ಹೊಂದಿಬರಬೇಕಾದರೆ, ಅದರ ನೈಸರ್ಗಿಕವಾದ 'ಪುರಾಣ ಪ್ರಜ್ಞೆ'ಯ ಹೊಸ ಸ್ಫುರಣೆ(?) ಬೇಕಾದರೆ, ಜೀವನದ ಅಂಗಾಂಗಳಲ್ಲಿಯೂ ಪಾರಮಾರ್ಥಿಕೋದ್ದೇಶದ ಉತ್ತರೋತ್ತರ ವರ್ಧಿಷ್ಣುವಾದ ಮಹಾ ಪ್ರವೃತ್ತಿಗಳು ಹೆಚ್ಚು ಪೂರ್ಣವಾಗಿಯೂ ಕೊನೆಮುಟ್ಟುವ ರೀತಿಯಲ್ಲಿಯೂ ಕಾರ್ಯನಿರತವಾಗಬೇಕು. ಆದರೆ ಇಲ್ಲಿ ನಮಗೆ ತೀಳಿಗೇಡಿತನದ ಅಥವಾ ತಪ್ಪು ತಿಳುವಳಿಕೆಯ ಅವಶೇಷಗಳಿಂದ ಅಡ್ಡಿ ಉಂಟಾಗುವ ಸಂಭವವಿದೆ. (ಎರಡೂ ತರದ ಪ್ರಸಂಗವೂ ಇದೆ.) ಯಾಕೆಂದರೆ, ಭಾರತೀಯ ಜೀವನದ ಹಾಗು ಮನದ ಕೆಲವೊಂದು ವಿಶೇಷ ಶಾಖೆಗಳಲ್ಲಿ ಎದ್ದು ಕಾಣುವ ಅತಿಶಯವಾದ ಪಾರಲೌಕಿಕತೆಯಿಂದುಂಟಾದ ಬೇಸರದ ಅವಿಶ್ವಾಸವು ವಿರಕ್ತ ಧಾರ್ಮಿಕರ ಅತ್ಯುಕ್ತಿಗಳನ್ನು ನೋಡಿದರೆ ಯೋಗ್ಯವೇ ಎಂದು ತೋರುವದು. ಆದರೆ ಅದು ಅಷ್ಟು ಯೋಗ್ಯವಲ್ಲ; ಯಾಕೆಂದರೆ, ಮುಖ್ಯ ಮಾತನ್ನೇ ಅದು ಮರೆತು ಬಿಡುವದು. ರಾಷ್ಟ್ರೀಯ ಇತಿಹಾಸದ ಸದ್ಯದ ಅವಸ್ಥೆಯಲ್ಲಿಯೂ ಒಮ್ಮೊಮ್ಮೆ ಹೀಗೆ ಕೇಳುವ ಜನರಿದ್ದಾರೆ. "ಸಮಾಜ ಜೀವನ, ರಾಜಕಾರಣ, ಕಾವ್ಯ, ಕಲೆಗಳಲ್ಲಿ ಪಾರಮಾರ್ಥಿಕತೆ ಎಂದರೆ ಎನ್ನುವದಾದರೂ ಏನು?" "ಕಾವ್ಯ ಮತ್ತು ಕಲೆಯಲ್ಲಿ ನೀವನ್ನುವ 'ಅಧ್ಯಾತ್ಮದ ಟಂಕಾರ' ಸೇರಿಕೊಂಡರೆ ಅವುಗಳಿಗೆ ಬರುವ ಹೆಚ್ಚಿನ

ಕಳೆಯಾವರೂ ಯಾವುದು?" "ಈ ಮಹಾ ಭೂತ ಸೇರಿಕೊಳ್ಳುವವರಿಂದ ರಾಜಕಾರ್ಯ ಸಮಾಜಕಾರ್ಯಗಳ ವ್ಯವಹಾರಿಕ ಪ್ರಶ್ನೆಗಳಿಗೆ ಆಗುವ ಲಾಭವೆಂತಹದು?" ಆದರೆ ಇದು ವಿಚಿತ್ರ ಮಾದರಿಯ ಅಜ್ಞಾನ; ಈಗ ಸಾಕಷ್ಟು ದಿನಗಳಿಂದ ಬಳಕೆಗೆ ಬಂದ ಐರೋಪ್ಯ ವಿಚಾರದ ಪ್ರತಿಧ್ವನಿ! ಈ ವಿಚಾರದಲ್ಲಿ ಧರ್ಮ ಹಾಗು ಪರಮಾರ್ಥಗಳ ಹಾದಿಯೇ ಬೇರೆ; ತರ್ಕ ಬುದ್ಧಿ ಹಾಗು ವ್ಯವಹಾರಿಕ ಜೀವನಗಳ ಹಾದಿಯೇ ಬೇರೆ. ಅವುಗಳ ತತ್ತ್ವವೇ ಬೇರೆ ಸಿದ್ಧಿಯ ರೀತಿಯೇ ಬೇರೆ. ಇದಲ್ಲದೆ, ಈ ಬಗೆಯ ಆದರ್ಶದ ಆಳಿಕೆಗೆ ಒಳಪಡಬೇಕೆನ್ನುವ ನಾವು ಹಿಂದು ಸ್ಥಾನಕ್ಕೆ ಬಗೆಹರಿಯದ ಧರ್ಮವನ್ನೂ ತಿಳಿವು ಮೀರುವ ತತ್ತ್ವದ ಅಟಮಟದ ಅನುಭಾವ ಮಾರ್ಗವನ್ನೂ ಬೋಧಿಸಿ ರಕ್ತಸ್ಫೂರಿತವಾದ ಪ್ರಾಯೋಜನಿಕ ಜೀವನದಿಂದ ಪಾರಲೌಕಿಕ ವೇದಾಂತಕ್ಕೆ ಅದನ್ನೆಳೆಯುತ್ತಿರುವವರಾಗಿಯೂ, ಇಂದಿನ ಜಗದ ಆಘಾತಗಳನ್ನು ತಾಳಿ ಸುಸಂಘಟಿತವಾದ ರಾಷ್ಟ್ರವೆನಿಸಿಕೊಂಡು ಸಮರ್ಥವಾಗಿ ಬಾಳಬೇಕಾದರೆ ಅವಶ್ಯವಾದ ಆಧುನಿಕತೆ ಹಾಗು ವಿವೇಕಗಳ ಹಾದಿಯಿಂದ ಭಾರತವನ್ನು ತಪ್ಪಿಸುತ್ತಿರುವವರಾಗಿಯೂ ಕೆಲವರಿಗೆ ಸಂಶಯವು ಬಾಧಿಸಬಹುದಾಗಿದೆ. ಆದಕಾರಣ ಪರಮಾರ್ಥ ತತ್ತ್ವನಿಯತವಾದ ನವಜನ್ಮವೆಂದರೇನೆಂಬುದನ್ನು ನಾವು ಸ್ಪಷ್ಟಪಡಿಸಲೇ ಬೇಕು.

## ಪರಮಾರ್ಥ ನಿಯತ ನವಜನ್ಮವೆಂದರೇನಲ್ಲ

ಆದರೆ, ಅದಕ್ಕೂ ಮೊದಲು ಪರಮಾರ್ಥ ನಿಯತ ನವಜನ್ಮವೆಂದರೆ ಏನಲ್ಲವೆಂಬುದನ್ನೇ ಹೇಳುವಾ. ಪ್ರಾಪಂಚಿಕ ಜೀವನವೆಂಬುದು ಕ್ಷಣಭಂಗುರವಾದ ಜಂಭವೆಂದಾಗಲಿ, ನಾವೆಲ್ಲರೂ ಆದಷ್ಟು ಬೇಗನೆ ಆಶ್ರಮಗಳನ್ನು ಸೇರುವ ಯತಿಗಳಾಗಬೇಕೆಂದಾಗಲಿ, ನಮ್ಮ ವ್ಯವಹಾರಿಕ ಜೀವನವನ್ನು ಗವಿ, ಗುಡ್ಡ, ಮಠಗಳ ಹಾದಿ ಹಿಡಿಸುವ ಸಾಧನೆಯನ್ನಾಗಿ ಮಾಡಬೇಕೆಂದಾಗಲಿ, ಮಾನವ ಕುಲದ ಸಾಮೂಹಿಕ

ಪ್ರಗತಿಗೂ ಐಹಿಕ ಜೀವನಕ್ಕೂ ಏನೇನೂ ಸಂಬಂಧವಿಲ್ಲದಂತೆ, ಮಹಾ ಪ್ರಾಗತಿಕ ಆದರ್ಶಗಳನ್ನಿಟ್ಟುಕೊಳ್ಳದೆ, ಕಂಬದಂತೆ ಸ್ತಬ್ಧ-ವಾಗಿರುವದೆ ಮೋಕ್ಷವೆಂದಾಗಲಿ, ಅದರ ಅರ್ಥವಲ್ಲ. ಭಾರತೀಯ ಚಿತ್ತದ ಕೆಲಕಾಲದ ಒಲವು ಹಾಗಿರಬಹುದಾದರೂ ಅದರ ಸಮಗ್ರವಾದ ರೀತಿಯು ಹಾಗೆಂದಿಗೂ ಇರಲಿಲ್ಲ. ಚಿತ್ತದ ಪೂರ್ವಾಭ್ಯಾಸದಿಂದಲೂ ಸಂಸ್ಕಾರಬಲದಿಂದಲೂ ಇನ್ನೂ ಅಂಟಿಕೊಂಡುಳಿದಿರುವ ವಿಚಾರದಂತೆ, ಕೆಲವು ಹಳೆಯ ಸಾಂಪ್ರದಾಯಿಕರು ಯುಕ್ತಿಸಿದ ಪ್ರಕಾರ, ಯಾವುದಾದರೂ ಮತಧರ್ಮದ ಸಿದ್ಧಾಂತ, ರೀತಿ, ಅಭಿಪ್ರಾಯಗಳಿಗೆ ಸರಿ ಹೋಗುವ ಹಾಗೆ ರಾಷ್ಟ್ರದ ಬದುಕನ್ನೆ ಒಂದು ಜಾತಿಯ ಎರ-ಕಕ್ಕೆ ಹೊಯ್ಯುವದೂ ಪಾರಮಾರ್ಥಿಕತೆಯ ಮಾರ್ಗವಲ್ಲ. ಹಿಂದೂ, ಇಸ್ಲಾಮ ಮತ್ತು ಕ್ರೈಸ್ತ ಇಂಥ ಸ್ಪಷ್ಟ ಭಿನ್ನವಾದ ಸಾಮಾನ್ಯ ಧರ್ಮರೂಪಗಳಲ್ಲದೆ ಇವುಗಳಿಂದಲೇ ಉಂಟಾದ ಅನೇಕ ಮತಮತಾಂತರಗಳಿಗೂ ಪಂಗಡ ಒಳಪಂಗಡಗಳಿಗೂ ಆಶ್ರಯಸ್ಥಾನವಾದೀ ದೇಶದಲ್ಲಿ ಅಂಥ ಪ್ರಯತ್ನವು ಬಯಸಬೇಕಾದದ್ದೇ ಎಂದು ತಿಳಿದರೂ ಇಂಥ ಯತ್ನವು ಕೈಗೂಡುವದು ಅಶಕ್ಯಪ್ರಾಯವಾಗಿದೆ. ಪಾರಮಾರ್ಥಿಕತೆಯು ಯಾವ ಮತಧರ್ಮಕ್ಕಿಂತಲೂ ವಿಶಾಲವಾಗಿದೆ. ಇಂದು ಉದಯವಾಗುತ್ತಿರುವ ಮಹತ್ತರ ವಿಚಾರಗಳ ದೃಷ್ಟಿಯಲ್ಲಿ ಯಾವ ಅತ್ಯುನ್ನತ ಮತವೂ ವಿಶ್ವಧರ್ಮದ ಮಹಾ ಪಂಥವೋ ಶಾಖೆಯೋ ಆಗಬಹುದು. ವಿಶ್ವಧರ್ಮವೆಂದರೆ—ಚಿರಂತನವಾದ ಪರಮೈಶ್ವರ್ಯಕ್ಕೆ ಸಮೀಪಿಸುವ ಮಾನವ ಜೀವನ ಸಮೀಕರಣವೊಂದು ಸಾಧ್ಯವಾಗುವಂತೆ, ಐಕ್ಯದ ಮೂಲವನ್ನು ಪರಮಾತ್ಮವನ್ನು, ಶಾಶ್ವತ ದಿವ್ಯವನ್ನು ಸಂಪಾದಿಸಲು ಇನ್ನು ಮುಂದೆ ಮಾನವನು ಹಿಡಿಯುವ ಸಾಧನಾ ಮಾರ್ಗ— ಎಂದು ನಾವು ತಿಳಿಯತಕ್ಕದ್ದು.

## ಪಾರಮಾರ್ಥಿಕತೆಯ ಸ್ವರೂಪ

ಇಷ್ಟೇ ಅಲ್ಲ; ನಮ್ಮ ದೃಷ್ಟಿಕ್ಷೇಪದಿಂದ ಯಾವುದನ್ನೂ ನಾವು ಹೊರದೂಡಲಾರೆವು. ಮಾನವ ಜೀವಿತದ ಯಾವ ಮಹಾಧ್ಯೇಯಗಳಾಗಲಿ, ಆಧುನಿಕ ಜಗತ್ತಿನ ಯಾವ ಮಹಾ ಸಮಸ್ಯೆಗಳಾಗಲಿ, ಮಾನವ ಪ್ರವೃತ್ತಿಯ ಯಾವುದೇ ರೂಪ, ಸಾಮಾನ್ಯವಾಗಿರಲಿ ಸಹಜವಾಗಿರಲಿ ಇರುವ ಪ್ರೇರಣೆ ಅಥವಾ ಪೂರ್ಣತೆ, ಶಕ್ತಿ, ಜ್ಞಾನಜ್ಯೋತಿ, ಆನಂದ, ತ್ರಾಣಗಳನ್ನು ಬೆಳೆಸಿ, ಹರಡಿ, ತುಂಬಿಸಲು ಮಾನವ ಜೀವದ ಇಚ್ಛೆಯಂತೆ ಅನುಕೂಲವಾಗುವ ಯಾವುದೇ ವಿಶಿಷ್ಟವಾದ ಉಪಾಯವಿರಲಿ— ಎಲ್ಲವನ್ನೂ ಒಳಗೊಂಡ ನೋಟ ಬೇಕು. ಆತ್ಮವಿಲ್ಲದ ಚಿತ್ತ, ಅಥವಾ ಆತ್ಮವಿಲ್ಲದ ದೇಹ ಇದು ನಮಗೆ ಬೇಕಾದ ಮನುಷ್ಯನ ಜಾತಿಯಲ್ಲ; ಆದ್ದರಿಂದ ಭಾರತೀಯ ಪಾರಮಾರ್ಥಿಕತೆಯು ಮನ, ಪ್ರಾಣ, ದೇಹಗಳನ್ನು ಅಲ್ಪವೆಂದು ಭಾವಿಸುವದಾಗಲಿ, ಕಡಮೆ ಬೆಲೆಯವೆಂದು ತಿಳಿಯುವದಾಗಲಿ ಮಾಡಲಾಗದು; ಅತಿಗೌರವದಿಂದಲೂ, ಬಹಳೇ ಮಹತ್ತ್ವವನ್ನು ಕೊಟ್ಟೂ ಅವುಗಳ ಪರಾಮರ್ಶ ಮಾಡುವದೇ ಅಗತ್ಯವಾಗಿದೆ; ಯಾಕೆಂದರೆ, ಮಾನವನೊಳಗಿನ ಜೀವ, ಆತ್ಮಗಳ ಉಪಾಧಿಗಳೂ ಉಪಕರಣಗಳೂ ಅವು ಆಗಿವೆ. ಬೇರೆ ಗುರಿ ಮತ್ತು ಮಹತ್ತರ ಉದ್ದೇಶಗಳನ್ನಿಟ್ಟುಕೊಂಡಾದರೂ ಸದ್ಯದ ವೈಜ್ಞಾನಿಕ ಅಥವಾ ಪ್ರಾಚೀನ ಗ್ರೀಕರ ವಿಚಾರದಂತೆಯೇ ಪುರಾತನ ಭಾರತೀಯ ಸಂಸ್ಕೃತಿಯಾದರೂ ಮನ, ಪ್ರಾಣ, ದೇಹಗಳ ಆರೋಗ್ಯ ಬೆಳಗೆ, ಕಸುವುಗಳಿಗೆ ಅವುಗಳಷ್ಟೇ ಬೆಲೆಕೊಡುತ್ತಿತ್ತು. ತಾವು ಹೇಳಿದರೆ ನಾವು ನಂಬಬೇಕೆಂದು ಕೆಲವರು ತಿಳಿಯುವಂತೆ ಹಿಂದುಸ್ಥಾನದಲ್ಲಿ ದಾರಿದ್ರ್ಯವನ್ನೇ ರಾಷ್ಟ್ರೀಯ ಆದರ್ಶವೆಂದಿಟ್ಟುಕೊಂಡದ್ದಾಗಲಿ, ಪಾರಮಾರ್ಥಿಕತೆಗೆ ಬೆಂಬದಿಗಾಗಿ ಅಕಿಂಚನತೆ, ಮಲಿನತೆಗಳು ಅವಶ್ಯವಾಗಿದ್ದವೆಂದಾಗಲಿ ಎಂದೂ ಇರಲೇ ಇಲ್ಲ. ಆದರ ಸೈನ್ಯಕ,

ರಾಜಕೀಯ, ಸಾಮಾಜಿಕ ಸಮರ್ಥತೆಗೂ ಧುರಂಧರತೆಗೂ, ವಂಶದ ಆರಾಮ ಸಮೃದ್ಧಿಗಳಿಗೂ, ದೇಹದ ನಿರಾಮಯತೆ ಶಕ್ತಿಗಳಿಗೂ, ಸಣ್ಣ ಪುಟ್ಟ ಸಕಲ ಕಲೆಗಳಿಗೂ, ರಸಜೀವನದ ತೃಪ್ತಿಗೂ ಶಾಸ್ತ್ರ ಹಾಗು ದರ್ಶನ ಗಳಿಗೂ, ಬುದ್ಧಿಯ ಕ್ರಿಯೆ ಪ್ರತಿಕ್ರಿಯೆಗಳಿಗೂ,— ಅಂತೂ ಆರೋಗ್ಯ ದಿಂದ ಬೆಳೆದ ಪರಿಪೂರ್ಣತೆಗೆ ಬೇಕಾಗುವ ಸಕಲ ಸನ್ನಾಹಕ್ಕೂ ಬೀಸ ಬಿಟ್ಟು ಅಡಗೊಟ್ಟಿದಾಯಿತು ಭಾರತವಲ್ಲಿ, ಭಾರತೀಯರ ಗುರಿಯು ಉನ್ನತವಿದ್ದಂತೆಯೆ ತಮ್ಮ ಧ್ಯೇಯ ಮಂದಿರದ ಅಸ್ತಿವಾರ ಪ್ರತಿಷ್ಠೆಯು ದೃಢವೂ ವಿಶಾಲವೂ ಆಗಿರಬೇಕೆಂದು ಅವರು ಹವಣಿಸಿದರಲ್ಲದೆ, ದೇಹಾ ದಿಗಳ ಪೂರ್ಣತೆಯ ಬಗ್ಗೆ ಬಹಳ ಯೋಚನಾ ಪೂರ್ವಕವಾದ ಯೋಜನೆಗಳನ್ನು ಮಾಡಿದ್ದರು. ನವಭಾರತವಾದರೂ ಇಂದಿನ ಹೆಚ್ಚು ಜಟಿಲವಾದ ಪರಿಸ್ಥಿತಿಗೆ ತಕ್ಕ ಕರಣೋಪಕರಣಗಳಿಂದಲೂ ನೂತನ ವಾದ ವಿಶಾಲ ವಿಚಾರಗಳ ಚೇತನೆಯಿಂದಲೂ ಅದೇ ಗುರಿಯನ್ನೆ ಅವಶ್ಯವಾಗಿ ಸಾಧಿಸೀತು. ಆದರೆ ಅದರ ಕಾರ್ಯದ ಹಾಗು ಪ್ರಯತ್ನದ ಕ್ಷೇತ್ರವೂ ಅದರ ಮಿದುಗೊಂಡ ಮನದ ತರತರಾವಳಿಯೂ ಪೂರ್ವ ಕ್ಕಿಂತಲೂ ಹೆಚ್ಚಾದೀತೇ ಹೊರ್ತು ಕಡಮೆ ಯಾಗಲಾರದು. ಪಾರ ಮಾರ್ಥಿಕತೆಯು ನಿಷೇಧ ಪ್ರಧಾನ ಬಹಿಷ್ಕಾರ ಪ್ರವೃತ್ತಿಯುಳ್ಳದ್ದಾಗುವ ಅವಶ್ಯಕತೆಯಿಲ್ಲ. ಅದರ ಪರಿಪೂರ್ಣತೆಯಲ್ಲಂತೂ ಸರ್ವಸಂಗ್ರಾಹಕ ವಾಗಿ ಅದು ಇರಬಲ್ಲದು, ಇರಲೇ ಬೇಕು.

**ಅಸ್ತಿತ್ವದ ಬಗೆಗಿರುವ ಪಾರಮಾರ್ಥಿಕ ದೃಷ್ಟಿಗೂ-**
**ಕೇವಲ ಭೌತಿಕವಾದ ಮಾನಸ ದೃಷ್ಟಿಗೂ ಇರುವ ಭೇದ**

ಹೀಗಿದ್ದರೂ, ಅಸ್ತಿತ್ವದ ಬಗೆಗಿರುವ ಪಾರಮಾರ್ಥಿಕ ದೃಷ್ಟಿಗೂ ಕೇವಲ ಭೌತಿಕವಾದ ಮಾನಸ ದೃಷ್ಟಿಗೂ ಬಹಳೇ ಬಿಡುತ್ತವೆ. ಪಾರ ಮಾರ್ಥಿಕ ದೃಷ್ಟಿಯೊ, ದೇಹ ಪ್ರಾಣ ಮನಗಳನ್ನು ಸಾಧನಗಳೆಂದು ತಿಳಿಯುವದಲ್ಲದೆ ಸಿದ್ಧಿಗಳೆಂದಲ್ಲ; ಮತ್ತು ಸಾಧನಗಳೆಂದರೂ ಅವು

ಕೂಡ ಅತಿ ಕ್ಲಿಷ್ಟವಾದವುಗಳೆಂದಾಗಲಿ, ಕೊನೆಮುಟ್ಟಿಸುವವೆಂದಾಗಲಿ ಹೇಳದು. ಅವು ಅವನ ಸಾಧನೆಯ ಕಾರಣ ದೇಹಗಳು ಮಾತ್ರ, ಜೀವವೆ ಸಮಗ್ರವಾಗಿ ಅವಲ್ಲವು. ಪಾರಮಾರ್ಥಿಕತೆಯು ಸಾಂತ ವಸ್ತುಗಳಲ್ಲಿ ಅಂತರ್ಗತವಾದ ಅನಂತವನ್ನು ಕಂಡುಹಿಡಿದು, ಅವುಗಳ ದೃಷ್ಟಿಯಿಂದ ಇವುಗಳ ಬೆಲೆಕಟ್ಟುವದು. ಅನಂತವು ಪೂರ್ಣವು. ಈ ಕಾರಣ ದೇಹಗಳು ಆ ಪೂರ್ಣವನ್ನು ಅಪೂರ್ಣವಾಗಿ ಆವಿಷ್ಕರಿಸಿದರೂ ಯಾವಾಗಲೂ ಅದನ್ನೇ ಹೊರಪಡಿಸಬೇಕೆಂದು ಅದರ ಸತ್ಯಾವಿಷ್ಕಾರಕ್ಕಾಗಿ ಪ್ರಯತ್ನಿಸುತ್ತಿರುವವು. ಜೀವ ಜಗತ್ತುಗಳ ಬೆಂಬದಿಗೊಂದು ನಿಜ-ವಸ್ತುವು ಇರುವದೆಂದೂ, ಅದು ಈ ದೃಷ್ಟಿಗೆ ಅರಿದಾಗಿರದೆ ಮಹತ್ತಮವಾಗಿದೆಯೆಂದೂ ತಿಳಿಯುವದಲ್ಲದೆ, ಜೀವ ಜಗತ್ತುಗಳ ಅಂತರ್ಯಾಮದಲ್ಲಿಯೂ ಇಂಥ ನಿಜವಸ್ತುವಿರುವದಾಗಿಯೂ, ಮತ್ತೂ ಆ ಪುರುಷ, ಪರಮಾತ್ಮ, ಪುರುಷೋತ್ತಮ ಪದಾರ್ಥವೇ ಜೀವನೊಳಗಿನ ಅತ್ಯಂತ ಮೌಲಿಕವಾದದ್ದೆಂದೂ ಜೀವನು ಅದರ ಆವಿಷ್ಕಾರ ಪಾತ್ರವಾಗುವಂತೆ, ಪರಿವರ್ತನೆಯನ್ನೋ ವಿಕಾಸವನ್ನೋ ಪರಿಣಾಮವನ್ನೊ ಹೊಂದುವದೇ ಪರಮಾರ್ಥವೆಂದೂ, ಜಗದ್ಭರಿತವಾದ ಈ ಭಾಗವತ ವಿಭೂತಿಯನ್ನೇ ಜೀವನು ಕಂಡು, ಉಂಡು, ತನ್ನ ಬಗೆ ಬಾಳುಗಳನ್ನು ಅದರೊಡನೆ ಸಮರಸಕ್ಕೆ ತಂದು ಇತರ ಜೀವಗಳೊಡನೆ ತನ್ನ ಹೊಂದಿಕೆಯ ಸಮತೂಕವನ್ನು ಪಡೆಯಬೇಕು ಎಂದೂ ಅದು ಪ್ರತಿಪಾದಿಸುವದು. ಈ ವಿಚಾರ ಪದ್ಧತಿಯಿಂದ ನಮ್ಮ ಸಾಮಾನ್ಯ ದೃಷ್ಟಿಯೇ ಅವಶ್ಯವಾಗಿ ಪಲ್ಲಟಗೊಳ್ಳುವದು ; ಜೀವನದ ಪುರುಷಾರ್ಥಗಳೆಲ್ಲವನ್ನೂ ಒಪ್ಪಿ-ಕೊಂಡರೂ ಅವುಗಳಿಗೆ ಈ ವಿಚಾರದಿಂದ ಹತ್ತುವ ಅರ್ಥವೇ ಬೇರೆ, ಹಾದಿಯೇ ಬೇರೆ .

## ಪಾರಮಾರ್ಥಿಕ ದೃಷ್ಟಿಯಿಂದ ನೀತಿ ನಡಾವಳಿಯೆಂದರೇನು ?

ದೇಹಕ್ಕೆ ಬಲವೂ ಆರೋಗ್ಯವೂ ಇರಬೇಕೆಂಬುದೇ ನಮ್ಮ ಧ್ಯೇಯ. ಆದರೆ ಉದ್ದೇಶವೇನು ? 'ಬಲಕ್ಕಾಗಿ ಬಲ, ಆರೋಗ್ಯಕ್ಕಾಗಿ ಆರೋಗ್ಯ'—ಯಾಕೆಂದರೆ ಅವು ಪಡೆಯಲರ್ಹವಾದವುಗಳೆಂಬ ಸರ್ವಸಾಧಾರಣವಾದ ಉತ್ತರ ಬಂದೀತು. ಅಥವಾ ನಮ್ಮ ಪ್ರಾಣ, ಮನಸ್ಸು, ಅಂತಃಕರಣಗಳ ತೃಪ್ತಿಗಾಗಿ ಅವಶ್ಯವಾದ ಸ್ವಾಸ್ಥ್ಯ ದೀರ್ಘಾಯುಷ್ಯಗಳ ಆಧಾರವೆ ಎನೆಂದೂ ಉತ್ತರ ಬರಬಹುದು. ಅಹುದು; ಅವುಗಳಿಗಾಗಿಯಂತೂ ಸರಿಯೇ ಸರಿ ; ಮಾನವನ ಸಮ್ಯಗ್ಜೀವನ ಧರ್ಮದ ಅಂಗವಾಗಿ, ದೇಹವು, ಆತ್ಮಾವಿಷ್ಕರಣದ ಸತ್ಪಾತ್ರವಾಗಬೇಕಾದರೆ ಅದರ ಪರಿಪೂರ್ಣತೆಯು ದೇಹಸಾಧನೆಯ ಭಾಗವಾಗಿದೆ— ಇದು ನಿಜ. ಆದರೆ ಮಾನವನೊಳಗಿನ ದೇವತ್ವ ಸಂಪಾದನೆ ಹಾಗು ದೇವತ್ವ ಪ್ರಕಾಶನಕ್ಕೆ ಅಡಿಗಲ್ಲಾಗಿ ಸಮ್ಯಗ್ಸಿದ್ಧ ದೇಹವು ಬೇಕು; ಭಗದುನ್ಮುಖವಾದ ಜೀವ ಧರ್ಮದ ಪರಿಸಮಾಪ್ತಿಗೆ ದೇಹವು ಒಂದು ಸಾಧನವು; ಸಂಸ್ಕೃತ ಗಾಥೆಯಾದರೂ 'ಶರೀರಂ ಖಲುಧರ್ಮ ಸಾಧನಂ' ಶರೀರವು ಧರ್ಮಾಚರಣೆಯ ಸಾಧನ—ವೆಂದು ಸಾರುವದು. ಬುದ್ಧಿ, ಮನಸ್ಸು ಅಂತಃಕರಣಗಳು ಮನುಷ್ಯನ ಸೂಕ್ಷ್ಮಶರೀರದ ಅಂಗಗಳಾಗಿರುವದರಿಂದ ಅವುಗಳ ಪರಿಪಕ್ವತೆಯಿಂದ ಬಾಳುವೆಗೊಂದು ಜೀವಕಳೆಯೂ ಸಾರ್ಥಕತೆಯೂ ಬರುವದೆಂದು ಸಾರ್ವಲೌಕಿಕವಾದ ವಿಚಾರಸರಣಿಯಿದೆ. ಇದೂ ನಿಜವಿದ್ದರೂ ಇದಷ್ಟೇ ನಿಜವಲ್ಲ; ಇವೂ ಆತ್ಮದ ಅಂಗಗಳಾಗಿರುವದರಿಂದ, ಇವುಗಳ ಬೆಳಗೆ, ನಯ, ಮಾರ್ದವ, ಬಲ, ತೀವ್ರತೆಗಳಿಂದ ತಂತಮ್ಮ ದಿವ್ಯಭಾವಗಳನ್ನು ಪಡೆಯಲು ಈ ಅಂಗಗಳಾದರೂ ಸಾಧನೆಯಲ್ಲಿರುವವಲ್ಲದೆ ಇವುಗಳ ಸಿದ್ಧಿಯಿಂದ ಜೀವನು ಜಗಲ್ಲಿಂಗವಾದ ವಿರಾಡ್ರೂಪದ ಸಾಮಿಪ್ಯವನ್ನು ಹೊಂದಿ, ಬರಬರುತ್ತ ಸಾಲೋಕ್ಯವನ್ನೂ ಸಾಯುಜ್ಯ ಸಾಧರ್ಮ್ಯಗಳನ್ನೂ ಸಂಪಾದಿಸುವದು—

ಎಂದೇ ಇವುಗಳ ಸಿದ್ಧಿಯುಗತ್ಯವಾಗಿವೆ. ಜನರೊಡನೆ ಹೆಚ್ಚು ವಿವೇಕ, ಸೌಮ್ಯತೆ, ಸಹಾನುಭೂತಿ, ಆತ್ಮನಿಗ್ರಹ ಸಂಪನ್ನವಾದ ವ್ಯವಹಾರ ಸಾಗಿ ಸಮಾಜಹಿತವೃದ್ಧಿಯಾಗುವದಕ್ಕಾಗಿಯೇ ಬೇಕಾದ ಸುವ್ಯವಸ್ಥಿತವಾದ ವೈಯಕ್ತಿಕ ಹಾಗು ಸಾಮಾಜಿಕ ನಡೆವಳಿಕೆಗೆ ಸರ್ವಸಾಮಾನ್ಯವಾಗಿ ನೀತಿ ಎಂದು ಹೆಸರು. ಆದರೆ ಪಾರಮಾರ್ಥಿಕ ದೃಷ್ಟಿಯಿಂದ ನೀತಿ ನಡಾವಳಿಯನ್ನು ನೋಡಿದರೆ, ಜೀವನದೊಡನೆ ಸಾಫಲ್ಯ ಪಡೆಯುವ ಒಂದು ಹೆಜ್ಜೆಯೆಂದೂ, ಅಂತರಾತ್ಮನಿಗೆ ಅಗತ್ಯವಾದ ಶೀಲ ಕೃತಿಗಳನ್ನು ಹದಗೊಳಿಸುವ ಹಾದಿಯೆಂದೂ ಅದರ ಅರ್ಥವಾಗುವದು.

**ಪಾರಮಾರ್ಥಿಕ ಸಂಸ್ಕೃತಿಯ ಕೆಲಸವು**

ನಮ್ಮ ಎಲ್ಲ ಗುರಿಗಳ ಬಗೆಗೂ ಚಟುವಟಿಕೆಗಳ ಬಗೆಗೂ ಇದೆ ಮಾತು ಸೈ; ಪಾರಮಾರ್ಥಿಕತೆಯು ಅವುಗಳನ್ನೆಲ್ಲ ಎತ್ತಿಹಿಡಿದು ಅವುಗಳಿಗೆ ಮಹತ್ತರವಾದ, ವಿಸ್ತೃತತರವಾದ ಅಂತರ್ಯದ ಅರ್ಥವನ್ನು ಕೊಡುವದು. ಪಾಶ್ಚಿಮಾತ್ಯ ಪದ್ಧತಿಯ ತತ್ತ್ವಜ್ಞಾನ ಶಾಸ್ತ್ರವು ಪಾರಮಾರ್ಥಿಕತೆಯನ್ನು ವಿವರಿಸುವ ರೀತಿಯೇ ಬೇರೆ. ಬುದ್ಧಿ ಗುಣಗಳನ್ನು ಜಾಗರೂಕತೆಯಿಂದ ನೈಯ್ಯಾಯಿಕರ ಮಾರ್ಗಹಿಡಿದು ಮೀಮಾಂಸೆ ಮಾಡಿಯೋ, ಪದಾರ್ಥವಿಜ್ಞಾನಾದಿ ಶಾಸ್ತ್ರಗಳು ನಮ್ಮೆದುರಿಟ್ಟ ಸಂಗತಿಗಳ ಅವಲೋಕನಮಾಡಿ ತರ್ಕದೀಪಿಕೆಯ ಪ್ರಕಾಶದಲ್ಲಿ ಅಸ್ತಿತ್ವದ ಪ್ರಥಮ ತತ್ವಗಳಬಗ್ಗೆ ನಡೆಸಿದ ನಿಷ್ಕಾಮ ಜಿಜ್ಞಾಸೆಯಿಂದಲೋ, ಅಥವಾ ಎರಡೂ ಪದ್ಧತಿಗಳ ಮಿಶ್ರಣದಿಂದಲೋ ಅದು ಸಾಗುವದು. ಆದರೆ ಪಾರಮಾರ್ಥಿಕ ದೃಷ್ಟಿ ವಿಶೇಷದ ರೀತಿಯಲ್ಲಿ ನೋಡಲಾಗಿ, ಶಾಸ್ತ್ರೀಯ ಅವಲೋಕನ ಮತ್ತು ತರ್ಕವಿವೇಕದಿಂದಷ್ಟೇ ಅಲ್ಲ ಅಂತಃಪ್ರಜ್ಞೆಯಿಂದಲೂ ಆತ್ಮಾನುಭವದಿಂದಲೂ ಅಸ್ತಿತ್ವ ತತ್ತ್ವಗಳನ್ನು ಕಂಡು ಹಿಡಿಯಬಹುದು ಎಂದು ತೋರುವದು. ವಿವಿಧವಾದ ಜ್ಞಾನ ಸಾಧನೆಗಳಲ್ಲೊಂದನ್ನೂ ಬಿಡದೆ ಅವುಗಳನ್ನು ಪ್ರಯೋಗಿಸಿ ಬಂದ ಫಲಿ-

ತಾಂಶಗಳನ್ನು ವಿಂಗಡಿಸಿ ರಚನೆಮಾಡಿ, ವಿಶ್ವೈಕ ನೈಜವಾದ ಪರಮ ಸತ್ಯದೊಡನೆ ಅವರ ಅನ್ವಯ ಸಂಬಂಧವನ್ನು ತೋರಿಸುವದೆ ತತ್ತ್ವಜ್ಞಾನದ ಪದ್ಧತಿಯಾಗಿ ಇದೆ. ಆತ್ಮಸಾಕ್ಷಾತ್ಕಾರಕ್ಕೆ ಅಸ್ತಿವಾರ ಹಾಕಿಕೊಟ್ಟು, ನರಜೀವವು ತನ್ನ ದೈವೀ ಪೌರುಷವನ್ನೂ ಪ್ರಕೃತಿಯನ್ನೂ ಸಂಪಾದಿಸುವಂತೆ ಮಾಡುವದೆ ತತ್ತ್ವಜ್ಞಾನದ ನಿಜವಾದ ಅರ್ಥವಾಗಿದೆ. ವಿಶ್ವಂಭರ ಪುರುಷನು ಪದಾರ್ಥ ಮಾತ್ರದಲ್ಲಿ ಹಿಡಿದ ಹಾದಿಯಲ್ಲಿ ಇನ್ನಿಷ್ಟು ಬೆಳಕು ಕೆಡಹುವದೆ ವಿಜ್ಞಾನದಿಂದುಂಟಾದ ಜಾಗತಿಕ ಜ್ಞಾನದ ಪರಿಣಾಮವು. ಅನ್ನ ಹಾಗು ಅನ್ನರಸಮಯ ಪ್ರಾಣವೆ ನಮ್ಮ ಜೀವನ ಪ್ರಾರಂಭ ಬಿಂದುವೆಂಬ ಕಲ್ಪನೆಯನ್ನಷ್ಟೆ ಜೀವನ, ಮಾನವ ಮನಸ್ಸುಗಳ ಜ್ಞಾನವನ್ನಷ್ಟೆಯಾಗಲಿ, ವಸ್ತುಜ್ಞಾನದಿಂದುಂಟಾಗುವ ವ್ಯವಹಾರಿಕ ಫಲ ಪರಿಣಾಮಗಳನ್ನಷ್ಟೆಯಾಗಲಿ ವಿಜ್ಞಾನವು ದೃಷ್ಟಿಪಥದಲ್ಲಿಟ್ಟುಕೊಳ್ಳಲಾಗದು. ಆತ್ಮವೇ ಪ್ರಥಮ ತತ್ತ್ವವೆಂದು ಇಟ್ಟುಕೊಂಡು, ಅನ್ನ ಪ್ರಾಣಶರೀರಗಳನ್ನು ಮನಸ್ಸಿನಿಂದಲೂ ಮನಸ್ಸನ್ನೂ ಮಿಕ್ಕಿದ ವಿಜ್ಞಾನದಿಂದಲೂ ಹಳೆಯ ಹಾಗೂ ಹೊಸ ಮಾನಸ ಪ್ರಾಣಯೋಗ ಶಾಸ್ತ್ರಗಳು ಪರಿಪಾಕಕ್ಕೆ ತಂದ ಅನುಭವಜನ್ಯಜ್ಞಾನದಿಂದ ಇದೇ ಹಾದಿಯೊಳಗಿನ ಹೊಸ ಸಂಶೋಧನೆಗೆ ಇಂಬು ಮಾಡಿಕೊಡುವದೆ ಪಾರಮಾರ್ಥಿಕ ಸಂಸ್ಕೃತಿಯ ಕೆಲಸವಾಗಿದೆ. ಪ್ರಾಪಂಚಿಕ ಪುರುಷಾರ್ಥಜ್ಞಾನವನ್ನೂ ಅದರ ಉದ್ದೀಪನದಿಂದ ಅದಕ್ಕೆ ಪ್ರತಿಭೆಯಿತ್ತ ಉತ್ತರಗಳನ್ನೂ ರುಚಿಕಟ್ಟಾಗಿ ಕುಶಲತೆಯಿಂದ ಸೂಚಿಸಿ, ಜೀವ ಜಗತ್ತುಗಳ ರಮ್ಯ ಚಿತ್ರಗಳನ್ನು ಸುಂದರವಾಗಿ ರಚಿಸಿ ಕೃತಿಗಳನ್ನು ಮಾಡುವದೆ ಕಾವ್ಯ ಚಿತ್ರಕಲೆಗಳ ಮೂಲೋದ್ದೇಶವಾಗಿತ್ತು. ಆದರೆ ಅದೆ ಪಾರಮಾರ್ಥಿಕ ಸಂಸ್ಕೃತಿ ಪಂಥದಲ್ಲಿ ಇವು ಕೂಡ ಜೀವ ಜಗತ್ತುಗಳಲ್ಲಿ ಸಾಮಾನ್ಯ ದೃಷ್ಟಿಗೆ ಮರೆಯಾಗಿರುವ ಆತ್ಮಿಕ ಮತ್ತು ವಿಶ್ವವ್ಯಾಪಕವಾದ ಅತ್ಯಂತ ಗಭೀರ ಸೌಂದರ್ಯವನ್ನು ಆವಿಷ್ಕರಿಸುವ ಉದ್ದೇಶವನ್ನೆ ಇಟ್ಟುಕೊಳ್ಳುವವು. ಮಾನವ ಜೀವನದ

ಪ್ರಾಥಮಿಕಾವಸ್ಥೆಯ ಪ್ರಾರಂಭದ ಯುಗಗಳಲ್ಲಿ, ರಾಜ ನೀತಿ ಶಾಸ್ತ್ರ, ಅರ್ಥ ಶಾಸ್ತ್ರ, ಧರ್ಮ ಶಾಸ್ತ್ರಗಳೂ ದೇವಪ್ರಾಣ ಮನಃಶಕ್ತಿಗಳ ಸಾಮರ್ಥ್ಯ ಬೆಳೆದು, ಜನರು ವಂಶ, ಕುಲ, ಜಾತಿ, ಮತ, ಪಂಗಡ, ಬಳಿ, ಬೆಡಗು ಎಂಬ ಹೆಸರಿನಿಂದ ಗುಂಪು ಕಟ್ಟಿಕೊಂಡು ಒಟ್ಟು ಜೀವನ, ಒಟ್ಟು ನಿರ್ಮಿತಿ, ಒಟ್ಟು ಭೋಗಗಳಿಗಾಗಿ ಬೇಕಾದ ಕಟ್ಟಳೆಗಳ ವ್ಯವಸ್ಥೆಯನ್ನೆ ವರ್ಣಿಸುವವು; ಆದರೆ ಪಾರಮಾರ್ಥಿಕ ಉದ್ದೇಶವು ಈ ಪ್ರಾಥಮಿಕ ರೂಪವನ್ನಷ್ಟೆ ಗುರಿಯಾಗಿಟ್ಟುಕೊಳ್ಳದೆ, ಮಾನವನು ತನ್ನ ನಿಜಾತ್ಮವಾದ ದೇವತ್ವವನ್ನು ಕಂಡು ಕೊಳ್ಳಲು ಪ್ರಪಂಚವೊಂದು ಪರಮಾರ್ಥದ ಗರುಡಿಮನೆಯಾಗುವಂತೆ ಮೊದಲು ಮಾಡುವದು, ಆ ಮೇಲೆ ದೇವಧರ್ಮದ ಮೂರ್ತಿಮತ್ತಾದ ಆಚರಣೆಯ ರಂಗಸ್ಥಲವನ್ನಾಗಿ ಮಾಡುವದು; ಕೊನೆಗೆ ಮಾನವನ ದೈವೀಸಂಪತ್ತಿನ ಗುಣಗಳಾದ ಜ್ಯೋತಿ, ಬಲ, ಶಾಂತಿ, ಐಕ್ಯ, ಸಾಮರಸ್ಯಗಳನ್ನು ಅಳವಡಿಸಿಕೊಳ್ಳಲು ಮಾನವ ವಂಶವೆ ತನ್ನ ವಿಕಾಸಮಾರ್ಗದಲ್ಲಿ ಸಾಮಷ್ಟಿಕವಾಗಿ ಮುಂದರಿದು ಸೇರಿಗೊಳ್ಳಲಿರುವ ದಿವ್ಯರಾಜ್ಯವನ್ನಾಗಿ ಮಾಡುವದು. ಪಾರಮಾರ್ಥಿಕ ಸಂಸ್ಕೃತಿ ಮತ್ತು ಪ್ರಪಂಚದಲ್ಲಿ ಪಾರಮಾರ್ಥಿಕತೆಯ ಪ್ರಯೋಗ ಮಾಡುವದೆಂದರೆ ಮೇಲೆ ಹೇಳಿದ್ದೆಲ್ಲವೂ ಮಾಡಬೇಕಾಗಿರುವದಲ್ಲದೆ ಅದರ ಹೊಟ್ಟೆಯಲ್ಲಿ ಬರುವ ಎಲ್ಲ ಮಾತುಗಳನ್ನೂ ಕೈಗೂಡಿಸಿಕೊಳ್ಳಬೇಕು. ಇದಿಷ್ಟೂ ಆಗಲೇ ಬೇಕು. ಇದಕ್ಕೆ ಒಂದು ಗುಂಜಿಯಷ್ಟೂ ಕಡಿಮೆಯಾಗಬಾರದು.

**ಇರೋಪಿನವರು ಇಂದು ಕಸವೆಂದು ಎಸೆದದ್ದನ್ನು**
**ನಾವು ನಾಳೆ ರಸವೆಂದೆತ್ತಿಕೊಳ್ಳುವದು ಸರಿಯಲ್ಲ**

ಯಾರಿಗೆ ಈ ಆದರ್ಶಗಳ ಅರ್ಥವಾಗದೆ ಸಂಬಿಗೆಗೇಡಾಗಿರುವದೋ, ಆವರು ಭಾರತ ಸತ್ತ್ವವನ್ನೆ ತನ್ನ ನೆರೆಯಲ್ಲಿ ಮುಳುಗಿಸಿ ಬಿಡುವ ಹೆದರಿಕೆಯನ್ನು ಕೆಲಕಾಲ ಉಂಟುಮಾಡಿದಂಥ ಐರೋಪ್ಯ

ಜೀವನ ಸೂತ್ರದ ಸೆಳೆತದಲ್ಲಿ ಇನ್ನೂ ಇರುವರು ಎನ್ನಲೇ ಬೇಕು. ಆದರೆ ಇರೋಪವೇ ತನ್ನ ಗ್ರಹಿಕೆಗಳ ಸಂಕುಚಿತತೆಯನ್ನು ಮಿಕ್ಕ ಬೇಕೆಂದು ಪೌರ್ವಾತ್ಯರ ಸಾರವತ್ತಾದ ಆಚಾರ ವಿಚಾರಗಳಿಂದ ಬೇಗ ಬೇಗನೆ ಒಳದುಂಬಿಕೊಳ್ಳುತ್ತಿದೆ. ಮೊದಲು ಈ ವಿಚಾರಗಳು ಹಾಗೆಯೇ ಸೋಸಿ, ಬಸಿದು, ಒಸರಿ ಬಂದುವು. ಆದರೆ ಇಂದು ತೀರ ಬಹಳ ದಿನಗಳವರೆಗೆ ತಿರಸ್ಕರಿಸಿ ಮರೆತು ಹೋದ ಹೊಸ ಲಕ್ಷಣಗಳನ್ನು ತಂದು ಕೊಟ್ಟು, ಅದರ ಅತ್ಯುತ್ತಮ ಲಕ್ಷಣಗಳಿಗೆ ಉಚ್ಛ್ರಾಯ ಸ್ಥಿತಿಯೂ, ಜ್ಞಾನ ಬೋಧೆಯೂ ರೂಪ ಕ್ರಾಂತಿಯೂ ಆಗಬೇಕೆಂದು ಅವು ಪಾಶ್ಚಿಮಾತ್ಯ ಕಾವ್ಯ ಕಲೆ, ಜೀವನ ವಿಚಾರಗಳಲ್ಲಿ ಸ್ವಚ್ಛಂದದ ಪ್ರವಾಹ ಪ್ರವಾಹಗಳಾಗಿ ಹರಿಯುತ್ತಿವೆ. ಈ ಪ್ರಕಾರ ಇರೋಪವು ಹೊಸ ಬೆಳಕಿನಲ್ಲಿ ತಿಳಿವಿನಿಂದ ತನ್ನನ್ನು ಹಿಗ್ಗಿಸಿಕೊಂಡು ಮಾನವ ನಲ್ಲಿಯೂ ಅವನ ಜೀವನದಲ್ಲಿಯೂ ದಿವ್ಯಕ್ರಾಂತಿಯಾಗಬೇಕೆಂಬ ಗುರಿಯನ್ನೂ ಆತ್ಮದ ತತ್ತ್ವಗಳನ್ನೂ ಅಳವಡಿಸಿಕೊಳ್ಳಲು ಸಮರ್ಥವಾಗುತ್ತಿರುವಾಗ ನಾವು ಮಾತ್ರ ಇರೋಪಿನವರು ತೊಟ್ಟು ಬಿಟ್ಟಂಗಿಗಳನ್ನು ಹಾಕಿಕೊಂಡು, ಅವರು ಇಂದು ಕಸಮಾಡಿ ಎಸೆದದ್ದನ್ನು ನಾಳೆ ನಾವು ರಸವೆಂದೆತ್ತಿಕೊಳ್ಳುತ್ತ, ಅವರ ಗಾಲಿಯ ಜಾಡಿನಲ್ಲಿ ತೊಳಲಾಡುವದು ತೀರ ವಿಚಿತ್ರವಾಗಿ ತೋರದಿರದು. ಇರೋಪಿನವರು ನಮ್ಮ ಮೇಲೆ ಎತ್ತಿ ಬಂದಾಗ್ಗೆ ನಾವೇನೊ ಅಶಕ್ತಿಯಲ್ಲಿಯೂ ಪ್ರಾಣಶಕ್ತಿಯ ಇಳಿತದ ಕಾಲಕ್ಕೂ ಇದ್ದ ಮಾತ್ರಕ್ಕೆ ನಮ್ಮ ಸಾಂಸ್ಕೃತಿಕ ಸ್ವಾತಂತ್ರ್ಯಕ್ಕೆ ಪಕ್ಷಘಾತವಾಗುವಂತೆ ಮಾಡುವದು ತರವಲ್ಲ. ಇಳಿತದ ಕಾಲವು ಎಲ್ಲ ನಾಗರೀಕತೆಗಳ ವೃದ್ಧಾಪ್ಯದಲ್ಲಿ ಒಂದಿಲ್ಲೊಂದು ದಿನ ಬಂದೇ ಬರುವದು. ಹೀಗೆ ಬಂದಷ್ಟಕ್ಕೆ ನಾವು ನಮ್ಮ ಪಾರಮಾರ್ಥಿಕತೆ, ಸಂಸ್ಕೃತಿ, ಜೀವಾಧಾರವಾದ ಮಾರ್ಗದರ್ಶಕ ವಿಚಾರಗಳು— ಇವೆಲ್ಲವೂ ತಪ್ಪಾಗಿದ್ದವೆಂದು ತಿಳಿದು, ಪರಮಾರ್ಥ, ಧರ್ಮ, ಭಾರತೀಯತ್ವಗಳನ್ನು ಹಾಗೆಯೆ ಮೇಲಿನ ಚಂದದ ಅಲಂಕಾರಕ್ಕೆಂದಿಟ್ಟುಕೊಂಡು ಜೀವನ

ವ್ಯವಹಾರಕ್ಕೆಲ್ಲ ಬಡಬಡನೆ ಐರೋಪ್ಯ ದೀಕ್ಷೆಯನ್ನೂ, ತಾರ್ಕಿಕ ಮುದ್ರೆಯನ್ನೂ, ಭೌತಿಕತೆಯ ಸಂಸ್ಕಾರವನ್ನೂ ಕೊಟ್ಟು ಬಿಡುವದೆ ಮೇಲೆಂದು ತಿಳಿಯಬೇಕೆನ್ನುವದು ಸಿದ್ಧವಾಗಲಾರದು. ಹಾಗಾದರೆ, ಇರೋಪಿನಲ್ಲಿ ಮೊನ್ನೆಯಾದ ಮಹಾಯುದ್ಧದ ಪ್ರಳಯದಿಂದ ಅಲ್ಲಿಯ ಶಾಸ್ತ್ರಗಳು, ಅವರ ಪ್ರಜಾಮತವಾದವು, ಅವರ ಪ್ರಗತಿಯು ಎಲ್ಲವೂ ತಪ್ಪಾಗಿ ಇರೋಪಿನವರು ತಮ್ಮ ಮಧ್ಯ ಯುಗ ಜೀವನ ಮಾರ್ಗಕ್ಕೆ ಹೊರಳಬೇಕೆಂದಾಗಲಿ, ಚೀನ, ತುರ್ಕಸ್ಥಾನ, ತಿಬೇಟಿಗಳ ಸಂಸ್ಕೃತಿಗಳ ಅನುಕರಣ ಮಾಡಬೇಕೆಂದಾಗಲಿ ಸಿದ್ಧವಾದೀತು. ಇಂಥ ಒಟ್ಟು ಗುತ್ತಿಗೆಯ ಮಾತುಗಳು ಅವಿಚಾರದ ಅಜ್ಞಾನದಲ್ಲಿ ಅಡಸಲಬಡಸಲತನದಿಂದ ಉರುಳಿಸಿದ ಗುಳುಗಳು ಬುರುಡೆಗಳೇ ಸರಿ.

**ನಾವು ಇರೋಪಿಯ ಆಧುನಿಕ ತತ್ವಗಳ ಸಾರವನ್ನು ಹೀರಿ ನಮ್ಮ ಪಾರಮಾರ್ಥಿಕ ಧ್ಯೇಯ ಆದರ್ಶಗಳೊಡನೆ ಸಮರಸ ಮಾಡಿಕೊಳ್ಳಬೇಕು**

ಎರಡೂ ಕಡೆಯವರೂ ತಪ್ಪು ಮಾಡಿದ್ದೇವೆ, ತಡವರಿಸಿದ್ದೇವೆ, ನಮ್ಮ ಆದರ್ಶಗಳ ನಿಜವಾದ ಪ್ರಯೋಗೋಪಯೋಗದಲ್ಲಿ; ಕಂಗೆಟ್ಟು ಸೇರಿದ್ದೇವೆ ಅತಿಯಾಗಿ ಗತಿಗೆಡುವ ಮಾರ್ಗಗಳಲ್ಲಿ. ಇರೋಪಿಗೆ ತಾನು ಮಾಡಿರುವ ತಪ್ಪು ತಿಳಿದು ಬಂದು ಅವರಿಂದ ಅದು ಪಾಠ ಕಲಿತು ತಿದ್ದಿಕೊಳ್ಳಲನುವಾಗಿದೆ; ಇಷ್ಟಕ್ಕದೇನೂ ಪ್ರಗತಿ, ಪ್ರಜಾಮತವಾದ, ವಿಜ್ಞಾನಗಳನ್ನು ಬೀಸಾಡುವ ಆಣೆ ಇಟ್ಟುಕೊಂಡಿಲ್ಲ; ಆದರೆ ಅವುಗಳಿಗೆ ಪೂರ್ಣತೆಕೊಟ್ಟು ಇದಕ್ಕೂ ತಕ್ಕುದಾದ ಹಾದಿಯಲ್ಲಿ ಹೆಚ್ಚು ಚೆನ್ನಾಗಿ ಉಪಯೋಗಿಸಲು ಪಣತೊಟ್ಟದೆ. ತನ್ನ ಬಗೆಬದುಕುಗಳ ನೆಲೆಬಿಡದೆ ಪೌರ್ವಾತ್ಯ ದೇಶಗಳಿಂದ ಬಂದ ಬೆಳಕನ್ನು ಬಳಸಿಕೊಂಡು ಅದು ತನ್ನ ಆತ್ಮ ತತ್ತ್ವದ ಬಾಗಿಲು ತೆರೆದುಕೊಳ್ಳುತ್ತಿರುವದು; ಆದರೆ ಜೀವನ, ವಿಜ್ಞಾನ, ಸಮಾಜಾದರ್ಶಗಳ ತನ್ನ ತತ್ತ್ವದ ಪರಿತ್ಯಾಗವನ್ನು ಮಾತ್ರ ಮಾಡಿಲ್ಲ. ನಾವೂ ಕೂಡ ಆಧುನಿಕ ಪ್ರಭಾವಗಳ

ಬಗೆಗೂ, ಭಾರತ ಶಕ್ತಿಯ ವಿಷಯದಲ್ಲಿಯೂ ಅಷ್ಟರಷ್ಟೇ ಪ್ರಾಮಾಣಿಕತೆ ಸ್ವಾತಂತ್ರ್ಯಗಳನ್ನು ವಹಿಸಬೇಕು; ತಪ್ಪಿ ಹೋಗಿದ್ದುದನ್ನು ತಿದ್ದಿಕೊಳ್ಳಬೇಕು; ಮುಕ್ತತರವಾದ, ವಿಶಾಲತರವಾದ ಮಾರ್ಗಗಳಿಂದ ನಮ್ಮ ಪಾರಮಾರ್ಥಿಕತೆಯನ್ನು ಸಾಧ್ಯವಿದ್ದರೆ ನಮ್ಮ ಪೂರ್ವಿಕರಿಗಿಂತಲೂ ಒಂದು ತೂಕ ಹೆಚ್ಚಾಗಿಯೇ ಪ್ರಯೋಗಿಸಿ ನೋಡಬೇಕು; ಪಾಶ್ಚಮಾತ್ಯ ವಿಜ್ಞಾನ, ತರ್ಕವಾದ, ಪ್ರಾಗತಿಕತೆ ಪ್ರಮುಖವಾದ ಆಧುನಿಕ ತತ್ತ್ವಗಳು ಇವೆಲ್ಲವುಗಳ ಸಾರವನ್ನು ಹೀರಿ ನಮ್ಮ ಪಾರಮಾರ್ಥಿಕ ಧ್ಯೇಯ ಆದರ್ಶಗಳೊಡನೆ ಸಮರಸ ಮಾಡಿಕೊಳ್ಳಬೇಕು, ಆದರೆ ನಮ್ಮ ಜೀವನ ಧರ್ಮದ ಸುಳಿ ಬಿಡಬಾರದು; ಬಾಳಬೇಕಾಂಬಾಸೆಯ ಮಿಡಿತ, ಪ್ರಾಯೋಗಿಕ ಚಟುವಟಿಕೆಗಳ ಪ್ರವೃತ್ತಿ, ಆಧುನಿಕವಾದ ಮಹಾ ಸಾಹಸಿಕ ಪ್ರಯತ್ನವಾದಗಳಿಗೆ ಇಂಬುಗೊಟ್ಟು ಜೀವಜಗತ್ತು ಈಶ್ವರ ಈ ತ್ರಯಗಳ ಬಗ್ಗೆ ಇರುವ ನಮ್ಮ ಮೂಲ ದೃಷ್ಟಿಯನ್ನು ಬಿಡದಿರಬೇಕು. ಈ ದ್ವಂದ್ವಗಳಲ್ಲೀನು ದ್ವಂದ್ವಯುದ್ಧವಾಗಬೇಕೆಂಬ ನಿಯಮವಿಲ್ಲ. ಇವೆರಡೂ ಮಾರ್ಗಗಳು ತಮ್ಮ ತಮ್ಮ ವಿವಕ್ಷಿತಾರ್ಥ ಪ್ರಪಂಚವನ್ನು ಕಂಡುಕೊಂಡು, ತಮ್ಮ ತಮ್ಮ ಹುರುಳುತಿರುಳಿನ ಸಾರಸರ್ವಸ್ವವನ್ನು ತಿಳಿದು ಪರಸ್ಪರರ ಪೋಷಣೆ ಪೂರ್ಣತೆಗಳಿಗೆ ಬೇಕೇ ಆಗಿವೆ.

**ಮಾನವನ ಆತ್ಮಸಂವರ್ಧನೆಗೆ ಬೇಕಾಗುವ ಹೊಸದಾಗಿ ದೊರಕಿದ ಯಾವ ಸಾಧನೆಯನ್ನೂ ನಿಜ ಪಾರಮಾರ್ಥಿಕತೆಯು ತೊರೆಯಲಾರದು**

ತನ್ನ ಸ್ವಭಾವದ ಸ್ವಧರ್ಮವನ್ನನುಸರಿಸಿ, ತನ್ನ ತಾನರಿತು ತಾನಾಗುವದರಿಂದಲೆ ಮಾನವ ಹಿತ ಸೇವಾಕಾರ್ಯವನ್ನೂ ತನ್ನ ಪರಿಪೂರ್ಣತೆಯನ್ನೂ ಭಾರತವು ಸಾಧಿಸಬಲ್ಲದು. ಹೀಗೆಂದ ಮಾತ್ರಕ್ಕೆ ಪಾಶ್ಚಿಮಾತ್ಯರು ಯಾವುದನ್ನು ಮೊದಲು ಬೆಳೆಸಿ ರೂಪಿಸಿ ತೋರಿಸಿದರೊ ಅವು ಅಥವಾ ಕಾಲಾನುಗತಿಯಿಂದ ತಾವಾಗಿ ಬಂದ ಹೊಸ ವಸ್ತುಗಳೆಲ್ಲ ತ್ಯಾಜ್ಯವೆಂದು ಕುರುಡು ಸಂಕುಚಿತತನದಿಂದ ತಿಳಿಯುವದೆಂದಲ್ಲ

ಇಂಥ ಮನೋವೃತ್ತಿಯು ಅವನ ಬುದ್ಧಿಯನ್ನು, ಅಧ್ಯವಸಾಯವನ್ನು, ಹೆಚ್ಚೇನೆಂದರೆ ಪರಮಾರ್ಥವಿರೋಧಿಯು. ಮಾನವನ ಆತ್ಮ ಸಂವರ್ಧನೆಗೆ ಬೇಕಾಗುವ ಹೊಸದಾಗಿ ದೊರೆತಿದ್ದ ಯಾವ ಸಾಧನೆಯನ್ನು ಸಾಮಗ್ರಿಯನ್ನು ನಿಜ ಪಾರಮಾರ್ಥಿಕತೆಯು ತೊರೆಯಲಾರದು. ನಮ್ಮ ಜೀವ ಸತ್ತ್ವದ ಮುಟ್ಟು ರೀತಿಯನ್ನು, ನಮ್ಮ ಸಹಜ ಸ್ವಭಾವವನ್ನು, ನಮ್ಮ ಕೇಂದ್ರ ಸ್ಥಿತಿಯನ್ನು ಬಿಡದೆ ಬಂದದ್ದೆಲ್ಲ ವಶವ ಮಾಡಿಕೊಂಡು ನಮ್ಮ ಪ್ರಿಯ ಕೃತಿಗಳನ್ನು ನಿರ್ಮಿಸುವುದೆ ಅದರ ಸತ್ಕಾರ್ಯವು. ಧರ್ಮವು ಭಾರತೀಯ ಚಿತ್ತದ ಜೀವನಾಡಿಯೊಳಗಿಂದ ರಕ್ತಗತವಾಗಿ ಬಂದಿದೆ. ಧರ್ಮ ಅಥವಾ ರಿಲಿಜನ್ನನ್ನು ಮಿತಿಮೀರಿಸಿದ್ದರಿಂದಲೇ ಹಿಂದುಸ್ಥಾನವು ಹಾಳಾಯಿತೆಂದು ಕೆಲವರು ಹೇಳುವರು. ಜೀವನವನ್ನೇ ರಿಲಿಜನ್ನಾಗಿಯೂ, ರಿಲಿಜನ್ನನ್ನೇ ಜೀವನವನ್ನಾಗಿಯೂ ಮಾಡಿ ಬಾಳು ಬದುಕು ಸೋತು ಬೀದಿಯವರ ಅಂಗಾಗುವ ಕಾಲವು ಭಾರತಕ್ಕೆ ಬಂದಿತಂತೆ. * ಕವೀಶ್ವರರು ಬೇರೊಂದು ಸಂದರ್ಭದಲ್ಲಿ ಹೇಳಿದ ಮಾತು ಒಗ್ಗಿಸಿಕೊಂಡು ಇಲ್ಲಿಯಾದರೂ 'ಭಾರತವು ಹೊರಳುತ್ತಿರುವ ಧೂಳಿಯೂ ಪವಿತ್ರವಾಗಿದೆ' ಎಂದು ನಾವು ಪ್ರತ್ಯುತ್ತರ ಕೊಡಲಾರೆ. ಅಧಃಪತನಕ್ಕೂ ಅಪಜಯಕ್ಕೂ ಅರ್ಥವಿಲ್ಲವೆಂದರೇನು? ಮತ್ತು ಯಾವ ರಾಷ್ಟ್ರಕ್ಕಾಗಲಿ ಮನುಷ್ಯನಿಗಾಗಲಿ ಧೂಳಿಶಯನವು ಸುಖಾಸನವೇನೂ ಅಲ್ಲ. ಅದರ ಪರಾಜಯದ ಈ ಕಾರಣವು ಮಾತ್ರ ಸುಳ್ಳು. ಹಿಂದುಸ್ಥಾನದ ಬಹು ಜನರು ಧರ್ಮವನ್ನೆ ತಮ್ಮ ಜೀವನ ಸರ್ವಸ್ವವನ್ನು ಮಾಡಿದ್ದರೆ ನಾವೀಗಿರುವ ಸ್ಥಿತಿಯಲ್ಲಿ ಉಳಿಯುತ್ತಿರಲಿಲ್ಲ. ಅವರ ಸಾರ್ವಜನಿಕ ಜೀವನವು ಅಧಾರ್ಮಿಕವು, ಅಹಂಕಾರಮಯವು, ಸ್ವಾರ್ಥಪರವು, ಭೌತಿಕವು ಆಗಿದ್ದುದರಿಂದಲೇ ಅವರು ಕೆಳಗೆ ಬಿದ್ದರು. ಇನ್ನೇನು ಇಷ್ಟು ಮಾತ್ರ ನಿಜ: ಒಂದು ಕಡೆಯಿಂದ ನಾವು ಅತಿ ಧರ್ಮಾಡಂಬರವೆಂದರೆ ನಿತ್ಯನಿಯಮ, ವಿಧಿವಿಧಾನ,

* ಗುರು ರವೀಂದ್ರರ 'Song of the Defeated' ದಲ್ಲಿ ಈ ಸಾಲಿರಬೇಕು.

ಪ್ರಜಾತಂತ್ರಗಳ ಜಾಲದಲ್ಲಿ ಸಿಲುಕಿ ಬಿದ್ದೆವು; ಇನ್ನೊಂದು ಕಡೆಯಿಂದ, ಪ್ರಾಚೀನ ಋಷಿಗಳು ಪ್ರಪಂಚಕ್ಕೆ ಬೆಳಕು ನೀಡಿ ಅದರ ಹಿತಕ್ಕೆ ಆಧಾರವಾಗಿ ಸಮಾಜ ಸ್ತಂಭಗಳಂತೆ ನಿಂತ ಹಾಗೆ ಒಳ್ಳೊಳ್ಳೆ ಬುದ್ಧಿವಂತರು ಇಹಲೋಕ ತಿರಸ್ಕಾರದ ಅತಿ ವಿರಕ್ತಿಯಿಂದ ತುಂಬಿದವರಾಗಿ ಹೋದರು. ಆದರೆ ನಿಜವಾದ ವ್ಯಾಧಿಯ ಮೂಲವು, ಒಟ್ಟಿನ ವಿಶಾಲತೆಯಲ್ಲಿ ಪಾರಮಾರ್ಥಿಕ ಊರ್ಮಿಯು ಇಂಗುವದರಲ್ಲಿಯೂ, ತರ್ಕಬುದ್ಧಿಯ ಸ್ವಚ್ಛಂದದ ಆಟವು ನಿಂತು ಹೋಗುವದದಲ್ಲಿಯೂ, ಪುರುಷಾರ್ಥಗಳಿಗೆ ಇತಿಗಾಲ ಬಂದು ಜೀವನದ ಪ್ರವೃತ್ತಿಯು ನಷ್ಟವಾಗಿ ಹೋಗುವವರಲ್ಲಿಯೂ ಇದ್ದಿತು.

**ಭಾರತವು ಮಾಡಬೇಕಾದ ಸಂಕಲ್ಪವು**

ಕದಾಚಿತ್, ಒಂದು ವಿಧದಲ್ಲಿ ರಿಲಿಜನ್ (Religion) ತೀರ ಅತಿಯಾಗಿ ಬಿಟ್ಟಿತ್ತು ಎನ್ನಬಹುದು; ರಿಲಿಜನ್ ಎಂಬ ಇಂಗ್ಲಿಷ ಶಬ್ದಕ್ಕೆ ಸರಿಯಾದ ಭಾರತೀಯ ಶಬ್ದವಿಲ್ಲ; ಇಂಗ್ಲೀಷಿನಲ್ಲಿ ಅದಕ್ಕೆ ಮತ, ವಿಧಿ, ದಾನಧರ್ಮ ಮೊದಲಾದ ಬಹಿರಂಗಾಚಾರದ ಅರ್ಥದ ವಾಸನೆ ಬಡಿದಿರುವದು. ಆದರೆ ಪರಿಪಕ್ವವಾದ ಪಾರಮಾರ್ಥಿಕ ಊರ್ಮಿಯ ಅನುಸರಣವೆಂದು ಅದಕ್ಕೆ ಅರ್ಥ ಕೊಟ್ಟಿದ್ದಾದರೆ, ಮತ್ತು ಜೀವನವನ್ನು ಸರ್ವಾಂಗಗಳಲ್ಲಿಯೂ ಸಂಭಾವ್ಯವಾದೆಲ್ಲ ದಿವ್ಯ ರೂಪಗಳಿಗೇರಿಸುವದೂ ಸರ್ವಸಮಾವೇಶಕವಾದ ಏಕವಸ್ತುವನ್ನು, ಆ ಪರಮಾತ್ಮನನ್ನು, ಅರಿತು ಅವರಲ್ಲಿ ಜೀವಿಸುವದೂ ಪಾರಮಾರ್ಥಿಕತೆ ಎಂದು ವ್ಯಾಖ್ಯಾನ ಮಾಡಿದ್ದಾದರೆ ಹಿಂದುಸ್ಥಾನದಲ್ಲಿ ರಿಲಿಜನ್ನು ಮಿತಿಮೀರಿ ಹೋಗಿರದೆ ತೀರ ಕೊರತೆಯಲ್ಲಿರುವದೆಂಬುದು ತಾನೆ ಕಾಣುವಂತಿದೆ; ಇದಲ್ಲದೆ ಇದ್ದ ರಿಲಿಜನ್ನೂ ಬಹಳೇ ಏಕಾಂಗೀನವಾಗಿಯೂ ಅಂತೆಯೆ ಉದಾರ ವೃತ್ತಿಯ ಅಭಾವವುಳ್ಳದ್ದಾಗಿತ್ತೆಂದೂ ಹೇಳಬಹುದು ಅದು ಬೇರೆ. ಇದಕ್ಕೆ ಸರಿಯಾದ ಉಪಾಯವು

ಯುಗಾನುಯುಗದಿಂದ ಬಂದ ಭಾರತೀಯ ಆದರ್ಶವನ್ನೇ ತುಚ್ಛೀಕರಿಸುವದರಲ್ಲಿರದೆ, ಅದರ ಪ್ರಾಚೀನ ವಿಶ್ವಂಭರ ಔದಾರ್ಯವನ್ನು ಅದಕ್ಕೆ ತಿರುಗಿ ತಂದು, ಇನ್ನೂ ವಿಪುಲ ತರವಾದ ಆಸ್ಪದವನ್ನು ಮಾಡಿ ಕೊಟ್ಟು, ರಾಷ್ಟ್ರೀಯ ಜೀವನವನ್ನೇ ನಿಜವಾಗಿಯೂ ಈ ಉನ್ನತ ಪಾರಮಾರ್ಥಿಕಾರ್ಥದಲ್ಲಿ ರಿಲಿಜನ್ನನ್ನಾಗಿ ಮಾಡಿಕೊಳ್ಳುವದರಲ್ಲಿ ಇದೆ. ಪಾಶ್ಚಿಮಾತ್ಯರ ತತ್ತ್ವಜ್ಞಾನ, ಕಾವ್ಯ, ಕಲೆಗಳು ಇದೇ ದಿಕ್ಕಿನಲ್ಲಿ ಕುಂಟುತ್ತ ಮುಗ್ಗರಿಸುತ್ತ ಸಾಗಿವೆಯಲ್ಲದೆ, ಅವರ ರಾಜಕೀಯ ಸಾಮಾಜಿಕ ಧ್ಯೇಯಗಳ ರಂಗದಲ್ಲಿ ಹೆಚ್ಚೆಚ್ಚಾಗಿ ಬೆಳಕು ಬರುತ್ತಿದ್ದು ಅರುಣ ಕಿರಣದ ನಸುಕು ಛಾಯೆಯೂ ಬಿದ್ದಿದೆ. ಈ ಆದರ್ಶವನ್ನು ಪ್ರಯೋಗದಲ್ಲಿ ತರಲು ಬೇಕಾದ ಜ್ಞಾನದ ಮರ್ಮವು ಭಾರತಕ್ಕೆ ಗೊತ್ತಿದೆ; ಪ್ರಯೋಗ ಮಾಡಲು ಮೊದಲು ಬೆಳಕು ಸಾಕಾಗದಿದ್ದಲ್ಲಿ ಈಗಿನ ಹೊಸ ಬೆಳಕನ್ನು ಬೆಳಗಿಸಿ ನೋಡಬಹುದು; ಹಳೆಯ ಪದ್ಧತಿಗಳಲ್ಲಿದ್ದ ತಪ್ಪು ತಡೆಗಳನ್ನು ಈಗ ತಿದ್ದಬಹುದು; ಪಾರಮಾರ್ಥಿಕ ಸಾಧನೆಯ ಬೆಳೆಯನ್ನು ರಕ್ಷಿಸಲು ಹಾಕಿಕೊಂಡ ಕರ್ಮಠತನದ ಬೇಲಿಗಳು ಮುಂದೆ ಅದರ ಬೆಳೆವಣಿಗೆಗೂ ವಿಸ್ತಾರಕ್ಕೂ ಅಡ್ಡಿ ತರುವ ತೊಡಕುಗಳಾಗಿ ಕುಳಿತಿದ್ದರೆ ಅವುಗಳನ್ನು ಮುರಿದು ಚೆಲ್ಲಿ ಅದರ ಹಾರಿಕೆಗೆ ಬೇಕಾದ ಬೀಸಾದ ವಿಪುಲ ಕ್ಷೇತ್ರವನ್ನು ಕೊಡಬಹುದು; ಭಾರತವು ಹಾಗೆ ಸಂಕಲ್ಪ ಮಾಡಿದ್ದಾದರೆ, ಯಾವ ತೊಡಕುಗಳನ್ನು ದಾಟಲು ಮಾನವ ಜಾತಿಯು ತಿಣಕಿ ತಡವರಿಸುತ್ತಿದೆಯೋ ಅವುಗಳನ್ನು ಲೀಲಾಜಾಲವಾಗಿ ಬಿಡಿಸಿ ಪಾಲೆಗಳಾಗಿ ಮಾಡಿಕೊಳ್ಳಬಹುದು; ಅದರ ಪ್ರಾಚೀನ ಜ್ಞಾನನಿಧಿಯಲ್ಲಿ ಎಲ್ಲ ಸಮಸ್ಯೆಗಳನ್ನೂ ಬಿಡಿಸುವ ಹಂಚಿಕೆ ಹೇಳಿದೆ. ಆದರೆ ಬರಲಿರುವ ಈ ನವಜನ್ಮದ ಪ್ರಸಂಗದಲ್ಲಿ ತನ್ನ ಹದಬೆದೆಗೆ ಸರಿಯಾಗಿ ಅದು ಪರಿಪುಷ್ಟವಾಗಿ ಬೆಳೆದು ಬರುವದೊ ಇಲ್ಲವೊ ಎಂಬುದು ಭಾರತ ಭಾಗ್ಯಾಧೀನವಾದ ಮಾತು.

---

**ಸಮಾಪ್ತ.**

# ಪರಿಶಿಷ್ಟ.

( ಸಂಪಾದಕೀಯ )

೧ ಶ್ರೀ ಅರವಿಂದರ ಜೀವನ.

೨ ಶ್ರೀ ಅರವಿಂದರ ಅಧ್ಯಾತ್ಮ.

೩ ಶ್ರೀ ಅರವಿಂದರ ಭರತಖಂಡ.

Aum

# ಶ್ರೀ ಅರವಿಂದರ ಜೀವನ

ಶ್ರೀ ಅರವಿಂದರ ಜೀವನವು ಬಹು ವೈಚಿತ್ರ್ಯಗಳ ಆಗರವು. ಸ್ವತಃ ಅವರ ತಮ್ಮಂದಿರು ಈ ಬಗೆಗೆ ಒಂದೆಡೆಯಲ್ಲಿ ತೆಗೆದ ಉದ್ಗಾರವಿದು:—

"ಅರವಿಂದರ ಜೀವನ ಚರಿತ್ರವು ಬೇರೆ ಬೇರೆ ನಾಲ್ಕು ಜನರ ಚರಿತ್ರಗಳ ನಡವಳಿಯಂತಿದೆ. ಕುಮಾರದಶೆಯೊಳಗಿನ ವಿದ್ಯಾವ್ಯಾಸಂಗರತನಾದ ವಿಲಾಯತಿಯ ಅರವಿಂದ, ಬಹು ಭಾಷಾವಿದನೂ ಅಪೂರ್ವ ಕವಿಯೂ ಸಂಸಾರಿಯೂ ಆದ ಬಡೋದೆಯ ಅರವಿಂದ, ಬಂಗಾಲದ ನವಜಾಗೃತಿಯ ಪ್ರಾಣಸ್ವರೂಪನಾದ ಕಲಕತ್ತೆಯ ಜನನಾಯಕ ಅರವಿಂದ, ಆನಂದ-ಜ್ಞಾನ-ಶಕ್ತಿ ತ್ರಯದ ಮೂರ್ತಿಮಂತ ವಿಗ್ರಹದಂತಿರುವ ಅಪೂರ್ವ ಯೋಗಶಕ್ತಿ ಸಂಪನ್ನರಾದ ಪಾಂಡಿಚೇರಿಯ ಅರವಿಂದ!!! ಇಂಥ ಈ ವಿಭಿನ್ನ ಚತುಃಸ್ವರೂಪಗಳ ರಹಸ್ಯವು ಅವರಿಗೆ ಅವರಿಗೇ ಗೊತ್ತು !!"

ತಮ್ಮನ ಈ ಆಶ್ಚರ್ಯಕರವಾದ ಕುತೂಹಲಕ್ಕೆ ಸ್ವತಃ ಅರವಿಂದರು ಹೇಳಿದ ಮಾತು ಇನ್ನಿಷ್ಟು ಚಮತ್ಕಾರವಾಗಿದೆ. ಅದು:—

"ಜೀವನದ ಈ ನಾಲ್ಕು ಅಧ್ಯಾಯಗಳ ಅಂತರಂಗ ಮನುಷ್ಯರು ನಾಲ್ಕು ಬೇರೆ ಬೇರೆ ಲೋಕದ ಜೀವರು. ಅವರೆಲ್ಲರು ಯಾರ ಸಹಚರರೋ, ಯಾವ ಯುಗಯುಗಾಂತರಗಳಾಚೆಯಿಂದ ಎಲ್ಲಿ ಯಾವ ಸ್ವಪ್ನಾಕಾಶದಲ್ಲಿ ಅವರು ಮಿನುಗುತ್ತಿದ್ದರೋ!"

ಈ ಮಾತಿಗೆ ಇಂದಿಗೆ ಪದಿನಾರು ವರುಷಗಳು ಸಂದವು. ಮೇಲಿನ ಮಾತು ಕಥೆ ನಡೆದುದರ ಆಚೆಗೆ ಇನ್ನು ಹದಿನಾರು ವರುಷ ಹಿಂದಕ್ಕೆ ಹೋದರೆ ಆಗೊಮ್ಮೆ ಇಂಥದೇ ಮತ್ತೊಂದು ಪ್ರಶ್ನೋತ್ತರವು ನಡೆದುದಾಗಿ ತಿಳಿಯುತ್ತದೆ. ಆಗ ಅವರ ಜೀವನದ ಮೂರನೆಯ ಖಂಡವು ಆರಂಭವಾಗುವದರಲ್ಲಿದ್ದಿತು. ಅವರ ಆಪ್ತೇಷ್ಟರಲ್ಲೆಲ್ಲ 'ಇವರಿಗೆ ಹುಚ್ಚು ಹಿಡಿದಿದೆ'ಯೆಂಬ ಕೂಗೇ ಕೂಗು. ಸತಿಯು ಆ ಸಂದೇಹದಲ್ಲೇ ಸಣ್ಣಾಗುತ್ತಿರಲು, ಆ ತನ್ನ ಸಹಧರ್ಮಿಣಿಗೆ ಶ್ರೀ ಅರವಿಂದರು ಬರೆದ ಒಂದು ವಿಸ್ತಾರವಾದ ಪತ್ರದಲ್ಲಿ ಹೇಳಿದ್ದೇನಂದರೆ:—

"ಇಂದಿನ ಜನರ ಜೀವನೋದ್ದೇಶ, ಮನೋಭಾವ, ಅವರ ಕಾರ್ಯಪ್ರವೃತ್ತಿ ಮುಂತಾದವುಗಳಂತೆ ನನ್ನವು ಅಲ್ಲ. ಸರ್ವ ವಿಷಯಗಳಲ್ಲಿಯೂ ಭಿನ್ನ. ಒಟ್ಟಾರೆ ಅಸಾಧಾರಣ. ಆದರೆ ಸಾಮಾನ್ಯರು ಅಸಾಧಾರಣವನ್ನು ಹುಚ್ಚೆಂದು ಹಳಿಯುವರು. ಆದರೆ ಆತನೇ ವಿಜಯಶಾಲಿಯಾದರೆ ಆಗ ಅವರೇ ಅವನಿಗೆ ಪ್ರತಿಭಾಶಾಲಿಯಾದ ಮಹಾಪುರುಷನೆಂದು ಪ್ರಶಂಸಿಸುವರು............... ನಾನು ಬಲ್ಲೆ:— ಈ ಅಧೋಗತಿಗಿಳಿದ ಜನಾಂಗವನ್ನು ಉದ್ಧರಿಸುವ ಬಲವು ನನ್ನ ಕಾಲೊಳಗೆ ಇದೆ. ಶಾರೀರಿಕ ಬಲವಲ್ಲ. ಕತ್ತಿ ತುಬಾಕಿಗಳಿಂದ ಕಾಳಗ ಮಾಡಲು ನಾನು ಹೊರಟಿಲ್ಲ. ಜ್ಞಾನ ಬಲವು. ಕ್ಷಾತ್ರತೇಜವೊಂದೇ ತೇಜವೆಂತಲ್ಲ. ಬ್ರಹ್ಮತೇಜವೆಂಬುದೂ ಒಂದುಂಟು. ಅದು ಜ್ಞಾನದ ಮೇಲೆ ನಿಂತುಕೊಂಡಿರುತ್ತದೆ. ನನಗೆ ಇದು ಹೊಸದಲ್ಲ. ರಕ್ತರಕ್ತದಲ್ಲಿ ಈ ಭಾವವನ್ನು ಪೋಣಿಸಿಕೊಂಡೇ ನಾನು ಜನ್ಮವನ್ನೆತ್ತಿರುವೆನು. ಪರಮೇಶ್ವರನು ಈ ಮಹಾವ್ರತವನ್ನು ನೆರವೇರಿಸುವ ಸಲುವಾಗಿಯೇ ನನ್ನನ್ನು ಭೂತಲಕ್ಕೆ ಕಳುಹಿಸಿರುವನು. ಹದಿನಾಲ್ಕನೆಯ ವರುಷದಲ್ಲಿ ಆ ಬೀಜವು ಮೊಳಕೆಯಾಗತೊಡಗಿ ಹದಿನೆಂಟನೆಯ ವಯಸ್ಸಿನಲ್ಲಿ ಅದರ ನೆಲೆಯು ದೃಢತರವೂ ಅಚಲವೂ ಆಯಿತು."

ಶ್ರೀ ಅರವಿಂದರ ಜೀವನವು ಹೀಗೆ ಅತಿ ವಿಲಕ್ಷಣಗಳ ರಾಶಿಯಾಗಿದೆ. ಅವರ ತಾಯಿಯ ತಂದೆಯು ಪೂಜ್ಯನಾದ ಋಷಿಯು. ಇತ್ತ ತಂದೆಯೋ ವಿಲಾಯತಿಯಲ್ಲಿ ವೈದ್ಯಕವನ್ನು ನಡೆಯಿಸಿದ ಕರ್ಮಕುಶಲನಾದ ಡಾಕ್ಟರನು. ಹೀಗೆ ಪೌರಸ್ತ್ಯ ಪಾಶ್ಚಾತ್ಯ ಜ್ಞಾನಗಳ ಪರಮೋಚ್ಚ ಶಿಖರದಲ್ಲಿ ಶ್ರೀ ಅರವಿಂದರ ಜನ್ಮ.

ಎಳನೆಯ ವಯಸ್ಸಿನಲ್ಲಿಯೇ ತಾಯಿ ತಂದೆಗಳೊಡನೆ ವಿಲಾಯತಿಯ ವಾಸ. ಹದಿನೆಂಟಕ್ಕೆ ಐ. ಸಿ. ಎಸ್. ಪರೀಕ್ಷೆ. ಕುದುರೆಯ ಸವಾರಿಯಲ್ಲಿ ನ್ಯೂನತೆಯಾದುದರಿಂದ ಮಾತ್ರಕ್ಕೆ ಪರೀಕ್ಷೆಯಲ್ಲಿ ತೇರ್ಗಡೆ ಹೊಂದದಿದ್ದರೂ ಮುಂದೆ ಎರಡು ವರುಷಗಳಲ್ಲಿ ಐ. ಸಿ. ಎಸ್. ಆದವರಿಗಿಂತ ಯಾವ ವಿಧದಲ್ಲಿಯೂ ಕಡಿಮೆಯಲ್ಲದ ಪದಪ್ರಾಪ್ತಿ. ಮೊದಲಿಗೆ ಬಡೋದೆಯ ಮಹಾರಾಜರ ಅಸಿಸ್ಟೆಂಟ್ ಪ್ರಾಯ್ವ್ಹೇಟ್ ಸೆಕ್ರೆಟರಿಯಾಗಿಯೂ, ಮುಂದೆ ಬಡೋದಾ ಕಾಲೇಜಿನ ವ್ಹಾಯಿಸ್ ಚಾನ್ಸಲರ್ ಆಗಿಯೂ ಹನ್ನೆರಡು ವರುಷಗಳನ್ನು ಕಳೆದರು.

ಇಪ್ಪತ್ತನೆಯ ವಯಸ್ಸಿನ ವರೆಗೆ ವಿಲಾಯತಿಯಲ್ಲಿದ್ದಾಗ ಐ. ಸಿ. ಎಸ್ ಪರೀಕ್ಷೆಗೆ ಪ್ರಯತ್ನಿಸುತ್ತಿದ್ದ ಆಗಿನ ಅರವಿಂದರ ವಿಚಾರವು ಎಷ್ಟು ಪ್ರಾಪಂಚಿಕ ಆಶೆ ಆಕಾಂಕ್ಷೆಗಳಿಂದ ಕೂಡಿರಬೇಕೋ ಎಂದು ನಮಗೆ ಅನಿಸಬಹುದು. ಆದರೆ ಹದಿನೆಂಟರೊಳಗಾಗಿಯೇ ತಮ್ಮೊಳಗೆ ಬ್ರಹ್ಮತೇಜದ ಸಂಚಾರವಾಗಿತ್ತೆಂದು ಅರವಿಂದರು ತಾವೇ ಹೇಳಿದ ಮಾತನ್ನು ನಾವು ಮೊದಲು ಕೇಳಿರುವೆವು

ಬಡೋದೆಯಲ್ಲಿ ರಾಜಸನ್ಮಾನದಲ್ಲಿದ್ದಾಗ ಅವರು ಎಂಥ ಬಿಂಕದಲ್ಲಿದ್ದರೋ ಎಂದು ನಮಗೆ ಅನಿಸಲು ಅವಕಾಶವಿದೆ. ಆದರೆ ಆ

ಕಾಲದ ಅವರ ಉದಾರ ವಾಣಿಯನ್ನಿಲ್ಲಿ ಕೇಳಿರಿ:— "ನನ್ನ ದೃಢ ವಾದ ನಂಬುಗೆಯೇನೆಂದರೆ— ಪರಮೇಶ್ವರನು ದಯಪಾಲಿಸಿದ ಗುಣ, ಪ್ರತಿಭೆ, ವಿದ್ಯೆ ಮತ್ತು ಧನ ಇವೆಲ್ಲವೂ ಆ ಭಗವಂತನವೇ. ಅವನ ಸೊತ್ತನ್ನು ಅವನಿಗೆ ಸಲ್ಲಿಸಲುಬೇಕು ಸ್ವತಃದ ಸುಖವಿಲಾಸಗಳಿಗಾಗಿ ವ್ಯಯ ಮಾಡಿದರೆ ನಾನು ಕಳ್ಳನೇ ಸರಿ."

೧೯೦೫ ರಿಂದ ಬಂಗಾಲದಲ್ಲೆದ್ದ ಬಿರುಗಾಳಿಯು ಸಾಮಾನ್ಯ-ವಾಗಿರಲಿಲ್ಲ. ಆಗಿನ ಆ ಗಾಳಿಯು ಹಾರಾಡದವರನ್ನೆಲ್ಲ ಹಾರಾಡಿಸಿ ಬಿಟ್ಟಿತು. ಕವೀಂದ್ರ ರವೀಂದ್ರರು ಸಹ ಆ ಕಾಲದಲ್ಲಿ "ಸಾಧನ ಭಜನ ಪೂಜನಗಳು ಸಾಕು." ಎಂದು ಜನ ಜಂಗುಳಿಯಲ್ಲಿ ಸೇರಿಕೊಂಡಿದ್ದರು. ಹಾಗೆಯೆ ಅರವಿಂದರು ಸಹ ಬಡೋದೆಯ ಐಸಿರಿಯನ್ನೆಲ್ಲ ತೊರೆದು ಆ ಕಾಲಕ್ಕೆ ಕಲಕತ್ತೆಯ ಕೋಲಾಹಲದಲ್ಲಿ ಕಾಲಿಟ್ಟು ಐದು ವರುಷ ಅದರೊಳಗಿದ್ದರು. ಆದರೆ ಆಗಿನ ಆ ಪ್ರಾದೇಶಿಕ ಕಾರ್ಯವಷ್ಟೇ ಯಾರ ಜನ್ಮೋದ್ದೇಶವಾಗಿರಲಿಲ್ಲವೋ ಅಂಥ ಈ ಋಷಿದ್ವಯರನ್ನು (ಶ್ರೀ ರವೀಂದ್ರರು ಮತ್ತು ಶ್ರೀ ಅರವಿಂದರು) ಆ ಝಂಝಾವಾತವು ತನ್ನ ಸುಳಿಯೊಳಗಿಂದ ಹೊರಗೆ ತಂದು ನಿಲ್ಲಿಸಿತು. "ಶಿಶುವಿನಂತೆ ಬಲಹೀನನಾಗಿರುವ ವರೆಗೆ ಅಂತರಂಗದ ಅಂತಃಪುರದಲ್ಲಿರಲುಬೇಕು" ಎಂದು ಹಾಡುತ್ತ ಹಾಡುತ್ತ ಕವೀಂದ್ರ ರವೀಂದ್ರರು ವಿಶ್ವವಿಖ್ಯಾತವಾದ "ಗೀತಾಂಜಲಿ" ಯನ್ನು ಬರೆದು ಮುಗಿಸಿದರು. ಇತ್ತ ಶ್ರೀ ಅರವಿಂದರು "ಅಧ್ಯಾತ್ಮವೇ ಭರತಖಂಡದ ಪಂಚಪ್ರಾಣವಾಗಿರುವದರಿಂದ ಅಧ್ಯಾ-ತ್ಮದ ಅಭಿವೃದ್ಧಿಯಿಂದಲೇ ಭರತಖಂಡದ ಅಭಿವೃದ್ಧಿ" ಯೆಂಬ ಭಗವತ್ಸಂದೇಶವನ್ನು ಪಡೆದು, ಸಾಕ್ಷಾತ್ಕಾರಹೊಂದಿ ಸೆರೆಮನೆಯಿಂದ ಹೊರಬಿದ್ದು ಪಾಂಡೀಚೆರಿಯ ತಪೋಭೂಮಿಗೆ ಪಯಣ ಬೆಳೆಸಿದರು.

ಫ್ರೆಂಚ್ ವಸಾಹತಿಯಾದ ಪಾಂಡಿಚೇರಿಯ ಗವ್ಹರ್ನರರಾದ ಪಾಲ್ ರಿಚರ್ಡ್‌ರು ಮಹಾನ್ ತತ್ವವೇತ್ತರು. ಅವರು ಅಷ್ಟರಲ್ಲಿ ಸಾಕ್ಷಾತ್ಕಾರೀ ವ್ಯಕ್ತಿಗಳನ್ನು ಹುಡುಕುತ್ತ ಸಮಸ್ತ ಭೂಮಂಡಲವನ್ನು ಕಾಲಕೆಳಗೆ ಹಾಕಿದ್ದರು. ಪರಮೇಶ್ವರನು ಅರವಿಂದರಿಗೆ ಪಾಂಡಿಚೇರಿಗೆ ಹೊರಡೆಂದು ಸ್ಪಷ್ಟವಾಣಿಯಿಂದ ಆಜ್ಞಾಪಿಸಿದ್ದು ಯಾಕೆಂಬುದರ ಅರ್ಥವು ಇಲ್ಲಿಯೇ ಇದೆ. ಹುಡುಕುತ್ತಿದ್ದ ಹಣ್ಣು ಕೈಯೊಳಗೇ ಬಿದ್ದಂತಾದ್ದರಿಂದ ಗವ್ಹರ್ನರರು ಅರವಿಂದರಿಗೆ ಸ್ಥಿರಾಶ್ರಯವನ್ನೇ ಕೊಟ್ಟುಬಿಟ್ಟರು.

ಐದು ವರುಷಗಳ ಏಕಾಂತ ಸಾಧನದಿಂದ ಅರವಿಂದರು ಸ್ವರ್ಗ, ಮರ್ತ್ಯ, ಪಾತಾಳಗಳಲ್ಲಿ ಎಲ್ಲಿ ಏನು ನಡೆದರೂ ಅದನ್ನೆಲ್ಲ ಅರಿಯುವಂಥ ಜ್ಞಾನವನ್ನೂ, ಸರ್ವತ್ರ ಭಗವದಿಚ್ಛೆಯನ್ನು ನಿರಾತಂಕವಾಗಿ ಅನುಭವಿಸುವ ಶಕ್ತಿಯನ್ನೂ ಪಡೆದುಕೊಂಡರು. ಬಳಿಕ ಏಳು ವರುಷಗಳ ವರೆಗೆ ಗವ್ಹರ್ನರರ ಬಿನ್ನಹದ ಮೇರೆಗೆ 'ಆರ್ಯ' ವೆಂಬ ದಿವ್ಯಜ್ಞಾನಕ್ಕೆ ಸಂಬಂಧಿಸಿದ ಮಾಸಿಕವನ್ನು ಹೊರಡಿಸಿ ಅದರಲ್ಲಿ ತಮ್ಮ ಮಹಾಜ್ಞಾನವನ್ನೆಲ್ಲ ಸೂರೆ ಮಾಡಿದರು. ಆ ಏಳು ಸಂಪುಟಗಳೆಂದರೆ ಹೊಸ ಯುಗದ ಏಳು ವೇದಗಳಂತೆ ಇವೆ.

ಇಷ್ಟೊತ್ತಿಗೆ ಬೇರೆ ಬೇರೆ ಕಡೆಯಿಂದ ಸಾಧಕರು ಬಂದು ಅಲ್ಲಿಗೆ ಸೇರತೊಡಗಿದರು. ಅದೇ ಹೊತ್ತಿಗೆ ಗವ್ಹರ್ನರರ ಸಹಧರ್ಮಿಣಿಯಾದ ಮೀರಾ ರಿಚರ್ಡರು ಅರವಿಂದರ ಯೋಗಮಾರ್ಗವನ್ನು ಅವಲಂಬಿಸಿದ್ದರಿಂದ ಆ ಪುಣ್ಯಚರಿತ್ರಳ ನೇತೃತ್ವದಲ್ಲಿ ಯೋಗಾಶ್ರಮವು ಸ್ಥಾಪಿಸಲ್ಪಟ್ಟಿತು. ಈಗ ಆಶ್ರಮದಲ್ಲಿ ಜಗತ್ತಿನ ಸರ್ವಭಾಗಗಳಿಂದ ಬಂದ ೧೫೦ ಮಂದಿ ಸಾಧಕರಿದ್ದಾರೆ.

ಯೋಗೀಶ್ವರ ಅರವಿಂದರು ಪಾಂಡೀಚೇರಿಯಲ್ಲಿ ಇಪ್ಪತ್ತಾರು ವರುಷಗಳಿಂದ ಮಹಾಯೋಗಯಜ್ಞನಿರತರಾಗಿ ಜಗತ್ತಿನ ಮಹಾ ವಿಚಾರಿಗಳೆಲ್ಲರ ದೃಷ್ಟಿಯನ್ನು ತಮ್ಮ ಕಡೆಗೆ ಸೆಳೆದು ಕೊಂಡಿರುವರು.

ಅವರ ಜೀವನದ ಮಹತ್ವಪರ್ವಗಳು:—

೧೮೭೨ ಆಗಸ್ಟ ೧೫ ಜನ್ಮ ತಾರೀಖು..
೧೮೯೦ ಆಯ್. ಸಿ. ಎಸ್. ಪರೀಕ್ಷೆಗೆ ನಿಂತದ್ದು
೧೮೯೩ ಫೆಬ್ರುವರಿ. ಗಾಯಕವಾಡ ಮಹಾರಾಜರೊಡನೆ ಬಡೋದೆಗೆ ಬಂದದ್ದು.
೧೯೦೫ ರ ಕೊನೆ. ಬಡೋದಾತ್ಯಾಗ.
೧೯೦೮ ಸೆರೆಮನೆಯಲ್ಲಿ ಭಗವತ್ಸಾಕ್ಷಾತ್ಕಾರ.
೧೯೧೦ ಎಪ್ರೀಲ್ ೪ ಪಾಂಡೀಚೇರಿಯಲ್ಲಿ ಪಾದಾರ್ಪಣ.
೧೯೧೪ ಆಗಸ್ಟ್. 'ಆರ್ಯ' ಮಾಸಿಕದ ಆರಂಭ.
೧೯೨೧ ಆಶ್ರಮಸ್ಥಾಪನೆ.

---

ಶ್ರೀ ಅರವಿಂದರ ದರ್ಶನದ ದಿವಸಗಳು:—

೧೫ ನೇ ಅಗಸ್ಟ್— ಯೋಗೀಶ್ವರರ ಜನ್ಮ ತಾರೀಖು.
೨೪ ನೇ ನವ್ಹೆಂಬರ್— ಯೋಗೀಶ್ವರರ ಸಾಕ್ಷಾತ್ಕಾರ ತಾರಿಖು.
೨೧ ನೇ ಫೆಬ್ರುವರಿ— ಮಾತಾಜೀ ಮೀರಾ ರಿಚರ್ಡರ ಜನ್ಮ ತಾರೀಖು.

( ಈ ಮೂರು ದಿನಗಳಲ್ಲಿ ಆಶ್ರಮವಾಸಿಗಳಿಗೂ, ಒಪ್ಪಿಗೆ ಸಿಕ್ಕ ಹೊರಗಿನವರಿಗೂ ಅಲ್ಪ ವೇಳೆಯ ದರ್ಶನವು ಮಾತ್ರ ಲಭಿಸುವದು. ಮಾತು ಯಾರೊಡನೆಯೂ ಇಲ್ಲ. )

---

**Aum**

# ಶ್ರೀ ಅರವಿಂದರ ಅಧ್ಯಾತ್ಮ



ಹಳೆಯ ವಿಚಾರದ ಸಾಧಕರೆಂದು ಕರೆಯಿಸಿ ಕೊಳ್ಳುವವರೆಲ್ಲರ ಗುರಿಯು ಸಾಮಾನ್ಯವಾಗಿ 'ಶಾಂತಿ'ಯೊಂದೇ ಎಂದು ಹೇಳಬಹುದು. ಇಹದಲ್ಲಿ ಶಾಂತಿಯೆಂದು ಯಾವದಕ್ಕೆ ಅನ್ನುವೆವೋ ಪರದಲ್ಲಿ ಅದಕ್ಕೆ ಮೋಕ್ಷವೆಂದು ಅನ್ನಬಹುದು. ಶಾಂತಿಯು ಬಹು ಅಧ್ಯಾತ್ಮಿಗಳ ಜೀವನದಲ್ಲಿ ಕಂಡು ಬರುವ ಪರಿಣಾಮವು. ಅದು ಆತ್ಮ ಜ್ಞಾನ, ಈಶಾನುಗ್ರಹ ಇಲ್ಲವೆ ಯೋಗಸಮಾಧಿ ಇವುಗಳಲ್ಲಾವದೊಂದರ ಫಲಸ್ವರೂಪ ವಾಗಿ ಬರಬಲ್ಲದು. ಅಂತೂ ಕೊನೆಗೆ ಬರತಕ್ಕದ್ದು ಶಾಂತಿ; ಅದೇ ಮುಂದೆ ಮೋಕ್ಷ. ಶಾಂತಿಯೇ ಅಧ್ಯಾತ್ಮ ಸುಖ. ದುಃಖದ ಕೈಯೊಳಗಿಂದ ತಪ್ಪಿಸಿಕೊಳ್ಳುವದೇ ಸರ್ವಶಾಸ್ತ್ರಗಳ ಉದ್ದೇಶ. ಪರಮಾತ್ಮನ ಅಥವಾ ಪರಬ್ರಹ್ಮನ ಶಾಂತಿಮಯ ಸ್ವರೂಪವನ್ನು ಯಾವದೇ ಮಾರ್ಗದಿಂದ ಉಪಾಸಿಸುವದೇ ಆ ಶಾಂತಿಯನ್ನು ಗಳಿಸುವ ಸಾಧನ.

ಈ ಹಳೆಯ ಹಾದಿಯಲ್ಲಿ ಪ್ರತ್ಯಕ್ಷವೆಂಬುದೆಲ್ಲಾ ಹೇಯವಾದದ್ದು, ದುಃಖಮಯವಾದದ್ದು, ಅಥವಾ ಅಶಾಶ್ವತವಾಗಿರುವದರಿಂದ ಅಸತ್ಯ ವಾದದ್ದು. ಆದ್ದರಿಂದ ಬಹುಶಃ ಹಳೆಯ ಮಾರ್ಗಗಳೆಲ್ಲೆಲ್ಲ ವೈರಾಗ್ಯಕ್ಕೆ ರಾಜಪಟ್ಟವಿದೆ. ವೈರಾಗ್ಯವೆಂದರೆ ಇಹ ಜೀವನದ ತಿರಸ್ಕಾರ. ಇದು ಹಳೆಯ ಸಾಧನಗಳಿಗೆಲ್ಲ ಅನಿವಾರ್ಯವಾದ ಪಥ್ಯ.

ಬೌದ್ಧ ಯುಗದ ಅನಂತರ ವೈದಿಕ ಸಂಸ್ಕೃತಿಯು ತಲೆಯೆತ್ತಿ ನಿಲ್ಲುವಾಗ ವೈರಾಗ್ಯ ಪ್ರಧಾನವಾದ ಈ 'ಶಾಂತಿಪಥ'ದ ಮೂಲಾಂಕುರವು

ಅಪೇಕ್ಷ್ಯವಾಗಿ ವೈದಿಕಕಾಲದಿಂದಾರಂಭಿಸಿ ಮುಂದೆ ಕಾಲಕಾಲಕ್ಕೆ ಪ್ರಾದೇಶಿಕ ಸಂತರು, ಶರಣರು, ದಾಸರು, ಭಗವದ್ಭಕ್ತರು ಮುಂತಾದವರಿಂದ ಪ್ರವೃದ್ಧ ಮಾನವಾಗಿ ಈಚೆಗಿನ ಒಂದೆರಡು ನೂರು ವರುಷಗಳೊಳಗಿನ ವೇದಾಂತಿಗಳ ಮೂಲಕ ಇದು ಅಧ್ಯಾತ್ಮದ ಅನಿವಾರ್ಯವಾದ ಆಧಾರಸ್ತಂಭವಾಗಿ ಬಿಟ್ಟಿದೆ.

**ಆದರೆ—** ಉಪನಿಷತ್ತುಗಳೊಳಗೆಲ್ಲ ಅತಿ ಪುರಾತನ ಕಾಲದವು-ಗಳೆಂದು ನಿರ್ಧರಿಸಲ್ಪಟ್ಟ ಭಾಗಗಳಲ್ಲಿ ಇದಕ್ಕಿಂತ ಭಿನ್ನವಾದ ಇನ್ನೊಂದು ಪಥದ ಅವಶೇಷವನ್ನು ಕಾಣುವೆವು. ಅಲ್ಲಿ ಪರಬ್ರಹ್ಮನ ಎರಡು ಸತ್ಯ ಸ್ವರೂಪಗಳ ವರ್ಣನೆಯಿದೆ. **ಒಂದು 'ಶಾಂತಮ್' ಇನ್ನೊಂದು 'ಸಮೃದ್ಧಮ್.'**

ಈ 'ಸಮೃದ್ಧಮ್' ಎಂಬುದಕ್ಕೇ ಇನ್ನೊಂದೆಡೆಯಲ್ಲಿ 'ಪ್ರತ್ಯಕ್ಷಂ ಬ್ರಹ್ಮ' ಎಂಬ ಶಬ್ದವು ಉಪಯೋಗಿಸಲ್ಪಟ್ಟಿದೆ. ಈ ಸಮೃದ್ಧಮ್ ಎಂಬುದರ ಕಲ್ಪನೆಯು ಸಹ ಈಗ ಮರೆತು ಹೋಗಿರುವದರಿಂದಲೇ ಉಪನಿಷತ್ಕಾಲದ ಮಹರ್ಷಿಗಳಲ್ಲಿ ಕೆಲವರ ಕಥೆಗಳ ಅರ್ಥವು ಸಹ ನಮಗೆ ತಿಳಿಯುವದಿಲ್ಲ. ರಾಜರಾಜೇಶ್ವರರ ಚಿತ್ತವನ್ನು ತನ್ನೆಡೆಗೆ ಹೊರಳ ಹಚ್ಚಿದ ಮಹಾ ಪ್ರಭಾವಶಾಲಿಯಾದ ರೈಕ್ವನೆಂಬ ಜ್ಞಾನಿಯು ರಾಜ ಕನ್ನಿಕೆಯನ್ನು ಅಪೇಕ್ಷಿಸಿದ್ದೂ, ಮಹಾ ಜ್ಞಾನಿಯಾದ ಯಾಜ್ಞವಲ್ಕ್ಯನು ತನಗೆ 'ಧನವೂ ಜ್ಞಾನವೂ ಕೂಡಿಯೇಬೇಕು' ಎಂದು ಪ್ರತಿಪಾದಿಸಿದ್ದೂ ವೈರಾಗ್ಯ ಮಾರ್ಗಕ್ಕೆ ಸರಿಹೋಗುವಂಥವುಗಳಲ್ಲ. ಆ ಕಾಲದಲ್ಲಿ ವೈರಾ-ಗ್ಯದ ಹೊರತು ಇನ್ನೂ ಒಂದು ವಂದನೀಯವಾದ ಮಾರ್ಗ ವಿದ್ದಿತೆಂಬುದೇ ಅವುಗಳ ಸೂಚನೆ. ಅದೇ 'ಸಮೃದ್ಧಮ್' ಸ್ವರೂಪದ ಉಪಾಸನೆ. ಛಾಂದೋಗ್ಯ, ಬೃಹದಾರಣ್ಯಕ ಮತ್ತು ಕೌಷಿತಕಿ ಈ ಮೂರು ಬೇರೆ ಬೇರೆ ಶಾಖೆಯ ಪುರಾತನ ಉಪನಿಷತ್ತುಗಳಲ್ಲಿ ಕಂಡುಬರುವ

ಪ್ರಾಣೋಪಾಸನೆಯೆಂಬ ಅಘಟಿತ ಘಟನ ವಿದ್ಯೆಯು ಈ ಸಮೃದ್ಧವಾ ಬ್ರಹ್ಮಕ್ಕೇ ಸಂಬಂಧಿಸಿದ್ದು. (ಆತ್ಮಕ್ಕೇ ಒಂದು ಕಾಲದಲ್ಲಿ ಪ್ರಾಣವೆಂದು ಅನ್ನುತ್ತಿದ್ದರು.) ವೈರಾಗ್ಯವೇ ಮಹತ್ವದ್ದೆಂದು ತಲೆಯಲ್ಲಿ ತುಂಬಿಕೊಂಡಿರುವ ಆಧುನಿಕ ತತ್ವವಿಚಾರಿಗಳಲ್ಲಿ ಬಹು ಜನರು ಈ ಪ್ರಾಣೋಪಾಸನೆಗೆ ಐಹಿಕವೆಂದು ತಿರಸ್ಕರಿಸುವದನ್ನು ನಾನು ಬಲ್ಲೆನು. ಯಾಕೆಂದರೆ ಇವರು ಪರಬ್ರಹ್ಮನ 'ಶಾಂತಂ' ಎಂಬ ಒಂದೇ ಸ್ವರೂಪಕ್ಕೆ ಮಹತ್ವವನ್ನು ಕೊಡುವ ಶಾಂತಿ ಪಥದ ಅನುರಾಗಿಗಳಾಗಿರುತ್ತಾರೆ.

ಆ ಪುರಾತನ ಕಾಲದಲ್ಲಿಯೇ ಇನ್ನೊಂದು ಮಾತಿನ ಪೂರ್ವ ಪಲ್ಲವಿಯು ಆರಂಭವಾಗಿದೆ. ಅದಾವುದೆಂದರೆ— ಒಂದು ತತ್ತ್ವದ ಎರಡು ಸತ್ಯರೂಪಗಳಲ್ಲಿ ಯಾವದಾದರೊಂದಕ್ಕೇ ಅಂಟಿಕೊಂಡರೆ ಸರ್ವನಾಶವು ಕಟ್ಟಿಟ್ಟಿದ್ದು, ಎಂಬುದೇ ಅದು. 'ಈಶಾವಾಸ್ಯ' ಉಪನಿಷತ್ತು ಈ ಮಾತನ್ನು ಮೊಟ್ಟಮೊದಲು ಕಂಡುಹಿಡಿದದ್ದು. ಆತ್ಮಜ್ಞಾನ ಮತ್ತು ಲೌಕಿಕಗಳಿಗೆ ಅದು ವಿದ್ಯೆ ಅವಿದ್ಯೆಗಳೆಂದು ಹೆಸರಿಟ್ಟು, ಅವಿದ್ಯೆಯಿಂದ ಅಂಧಂ ತಮಸ್ಸು ಪ್ರಾಪ್ತವಾದರೆ ವಿದ್ಯೆಯಿಂದ ಅದಕ್ಕಿಂತ ಹೆಚ್ಚಿನ ತಮವು ಪ್ರಾಪ್ತವಾಗುವದೆಂದು ಹೇಳಿ ಈ ಉಪನಿಷತ್ತು— ಅವಿದ್ಯೆಯಿಂದ ಮೃತ್ಯುವನ್ನು ಗೆದ್ದು ವಿದ್ಯೆಯಿಂದ ಅಮರತ್ವವನ್ನು ಪಡೆಯಬೇಕೆಂದು ವಿದ್ಯೆ ಮತ್ತು ಅವಿದ್ಯೆ ಇವೆರಡರ ಬೆಸಿಕೆಯನ್ನು ಹಾಕುತ್ತದೆ. ಈ ಪಲ್ಲವಿಯನ್ನೇ ಮುಂದೆ ಭಗವದ್ಗೀತೆಯು ಪದವನ್ನಾಗಿ ವಿಸ್ತರಿಸಿತು; ಆ ಪದವನ್ನೇ ಈಗ ಶ್ರೀ ಅರವಿಂದರು ಮಹಾ ಕಾವ್ಯವನ್ನಾಗಿ ಮಾಡಲು ಹವಣಿಸುತ್ತಿದ್ದಾರೆ.

ಯೋಗೀಶ್ವರ ಅರವಿಂದರು 'ಶಾಂತಂ' ಮತ್ತು 'ಸಮೃದ್ಧಂ' ಇವೆರಡರ ಸಮನ್ವಯವನ್ನೇ ತಮ್ಮ ಗುರಿಯಾಗಿ ಇಟ್ಟುಕೊಂಡಿದ್ದಾರೆ. ಇದೇ ಅವರ ಮುಖ್ಯ ತತ್ತ್ವವು. ಅರವಿಂದರು ಜಗನ್ಮಿಥ್ಯೆಯನ್ನು

ಸಾರುವ ಮಾಯಾವಾದಿಗಳಲ್ಲ. ಸರ್ವಂ ಖಲ್ವಿದಂ ಬ್ರಹ್ಮವೆಂದೆನ್ನುವ ಆನಂದವಾದಿಗಳು. ಇವರು ಜೀವನವನ್ನು ಅಲ್ಲಗಳೆಯರು. ಅದನ್ನು ದಿವ್ಯಯಜ್ಞವಾಗಿ ಬಗೆಯುವರು. ಜೀವನದಲ್ಲಿ ದೇವನನ್ನು ಅನುಭವಿಸಬೇಕೆಂದು ಇವರು ಬೋಧಿಸುತ್ತಾರೆ. Realise God in life; whole life is yoga. ಸಮಸ್ತ ಜೀವನವು ಯೋಗಸ್ವರೂಪವೆಂಬುದು ಶ್ರೀ ಅರವಿಂದರ ಉದ್ಘೋಷ. ಇವರು ಹೇಳುವದೇನೆಂದರೆ:—

ಆಧ್ಯಾತ್ಮಿಕತೆಯೆಂದರೆ ಕೇವಲ ಸೂಕ್ಷ್ಮ ತತ್ವ ಪರಾಯಣತೆಯೆಂದಾಗಲಿ, ಕೆಲಸವಿಲ್ಲದೆ ಬರಿ ಕನಸನ್ನು ಕಾಣುವ ಪ್ರವೃತ್ತಿಯೆಂದಾಗಲಿ ನಾನು ತಿಳಿಯುವದಿಲ್ಲ.—

"By Spirituality we do not mean a remote metaphysical mind or tendency to dream rather than to act............Spirituality is not necessarily exclusive; it can be and its fullness must be all inclusive."

ಆಧ್ಯಾತ್ಮಿಕತೆಯೆಂಬುದು ಅವಶ್ಯವಾಗಿ ಸರ್ವ ಸಂಪರ್ಕ ರಹಿತವಾದದ್ದಾಗಿರಲೇ ಬೇಕೆಂಬುದೇನೂ ಇಲ್ಲ. ಅದು ಸರ್ವವನ್ನೊಳಕೊಂಡದ್ದಾಗಿ ಇರಬಲ್ಲದು. ಅದೇಕೆ? ಅದರ ಪೂರ್ಣದಶೆಯಲ್ಲಿ ಅದು ಹೀಗೆ ಸರ್ವವನ್ನೊಳಕೊಂಡದ್ದಾಗಿಯೇ ಇರಲಿಕ್ಕೆ ಬೇಕು.

"Nor do we mean the exclusion of anything whatever from our scope, of any of the great aims of human life, any of the great problems of our modern world........ Spirit without

mind, spirit without body is not the Type of man, therefore a human spirituality must not belittle the mind, life or body."

ನಮ್ಮ ದೃಷ್ಟಿಪಥದಿಂದ ಯಾವುದನ್ನೂ ಬಹಿಷ್ಕರಿಸುವುದು ನನ್ನ ಅರ್ಥವಲ್ಲ. ಮಾನವ ಜೀವನದ ಮಹಾ ಆದರ್ಶಗಳು, ಆಧುನಿಕ ಜಗತ್ತಿನ ಮಹಾಸಮಸ್ಯೆಗಳು ಯಾವುವೂ ನಮ್ಮ ದೃಷ್ಟಿಕೋನಕ್ಕೆ ಬಹಿರ್ಭೂತಗಳಲ್ಲ. ದೇಹರಹಿತವಾದ, ಮನೋರಹಿತವಾದ ಆತ್ಮವು ಅದೇನೇ ಇದ್ದರೂ ಮಾನವ ಮೂರ್ತಿಯಲ್ಲ. ಆದುದರಿಂದ ಮನುಷ್ಯ ಕೋಟಿಗೆ ಸಂಬಂಧಿಸಿದ ಅಧ್ಯಾತ್ಮವು ದೇಹ-ಪ್ರಾಣ-ಮನಗಳನ್ನು ಕ್ಷುಲ್ಲಕವೆಂದೆಣಿಸಲಾಗದು.

**ಓಂ ಶಾಂತಮ್, ಸಮೃದ್ಧಮ್.**

---

Aum

# ಶ್ರೀ ಅರವಿಂದರ ಭರತಖಂಡ



ಭರತಖಂಡದ ವಿಷಯದಲ್ಲಿ ಶ್ರೀ ಅರವಿಂದರ ಭಾವನೆಯು ನಮ್ಮೆಲ್ಲರಂತೆ ಸಂಕುಚಿತವಾಗಿಲ್ಲ; ಅವರು ಇದನ್ನು ಜಗತ್ತಿನ ಕಲ್ಯಾಣ ಮಂಟಪವೆಂದು ಅರಿತಿದ್ದಾರೆ. ೧೯೦೮ ರಲ್ಲಿ ಒಂದು ವರುಷದ ಕಡು ತರವಾದ ಏಕಾಂತದಲ್ಲಿ ಯೋಗಮುಖದಿಂದ ಈಶ್ವರನು ಕೊಟ್ಟ ದಿವ್ಯ ಸಂದೇಶದ ಮೂಲಕವಾಗಿ ಇವರಿಗೆ ಈ ವಿಷಯವು ವಿದಿತವಾಯಿತು. ಅಂತಲೇ ಹಿಂದುಸ್ಥಾನದ ಅರವಿಂದರು ಅಂದಿಗೆ ಜಗತ್ತಿನ ಅರವಿಂದರಾದರು .

ಅರವಿಂದರಿಗೆ ಲಭಿಸಿದ ಆ ದಿವ್ಯ ಭಗವತ್ಸಂದೇಶವಿದು:—

"ಭಾರತವಾಸಿಗಳು ಸನಾತನ ಧರ್ಮದ ಸಲುವಾಗಿ ಎಚ್ಚತ್ತು ಏಳುತ್ತಿದ್ದಾರೆ. ಅವರ ಈ ಜಾಗೃತಿಯು ಸ್ವತಃ ಅವರ ಸಲುವಾಗಿ ಇರದೆ ಅದು ಜಗತ್ತಿನ ಸಲುವಾಗಿ ಉಂಟಾಗಿದೆ. ಜಗತ್ತಿನ ಸೇವೆ ಗೆಂದು ನಾನು ಅವರನ್ನು ವಿಮುಕ್ತರನ್ನಾಗಿ ಮಾಡಲಿದ್ದೇನೆ. ಯಾವ ಯಾವ ಹೊತ್ತಿಗೆ ಭರತಖಂಡವು ಏಳುತ್ತಿದೆಯೆಂದು ಹೇಳುವರೋ ಆಯಾ ಕಾಲದಲ್ಲಿ ಸನಾತನ ಧರ್ಮವು ಏಳುತ್ತಲಿರುವದು. ಯಾವಾಗ ಹಿಂದುಸ್ಥಾನವು ಮಹತ್ತರವಾದ ಸ್ಥಿತಿಗೆ ಬರಲಿದೆಯೆಂದು ಹೇಳಲಾ ಗುವದೋ ಆವಾಗ ಸನಾತನ ಧರ್ಮವು ಮಹತ್ತರವಾದ ದಶೆಗೆ ಬರು ವದು. ಯಾವಾಗ ಭರತವರ್ಷವು ವಿಶಾಲವೂ ವಿಸ್ತೃತವೂ ಆಗಲಿದೆ ಯೆಂದು ಹೇಳಲ್ಪಡುವದೋ ಆವಾಗಳೆಲ್ಲ ಸನಾತನ ಧರ್ಮವು ಜಗ ತ್ತಿನ ಮೇಲೆ ವ್ಯಾಪಕವೂ ವಿಸ್ತೃತವೂ ಆಗುವದು."

ಶ್ರೀ ಅರವಿಂದರು 'ಉತ್ತರಪಾರಾ ಉಪನ್ಯಾಸ'ದಲ್ಲಿ ಉಲ್ಲೇಖಿಸಿದ ಈ ದೈವೀ ಸಂದೇಶದ ಸೂತ್ರದ ಮೇಲೆ ಮುಂದೆ ಹತ್ತು ವರುಷಗಳ ಅನಂತರ 'ಭಾರತೀಯ ನವಜನ್ಮ' ಎಂಬ ವಿಸ್ತೃತ ಭಾಷ್ಯವನ್ನು ಬರೆದಿದ್ದಾರೆಂದು ಹೇಳಬಹುದು.

ಸಮಸ್ತ ಪೃಥ್ವಿಯ ಉನ್ನತಿಯು ಭರತಖಂಡದ ಉನ್ನತಿಯ ಮೇಲೆ ಅವಲಂಬಿಸಿದೆ. ಈ ಉನ್ನತಿಯು ಅಧ್ಯಾತ್ಮವನ್ನು ಆಶ್ರಯಿಸಿದೆ. ಎಂಬುದನ್ನು ಜಗತ್ತಿಗೆ ಸಾರುವ ಪ್ರವಾದಿಯು ಇವರೊಬ್ಬರೇ. ಈ ವಿಷಯವನ್ನು ಅರವಿಂದರು ಮುಂದೆ ತಮ್ಮ ಬಹು ಗ್ರಂಥಗಳಲ್ಲಿ ಉದ್ಘೋಷಿಸಿದ್ದಾರೆ, 'ಯೋಗ ಮತ್ತು ಅದರ ಉದ್ದೇಶ' ಎಂಬ ಪುಸ್ತಕದಲ್ಲಿ— "ಸದ್ಯದ ಮಾನವಕೋಟಿಯಲ್ಲಿ ಸತ್ಯಯುಗದ ಸಮೃದ್ಧಿ ಸಾಮರಸ್ಯಗಳು ಒಡಮೂಡಬೇಕಾದರೆ ಹೊರಮುಗ್ಗಲಿನ ಯಾವ ಮಾರ್ಪಾಡುಗಳಿಂದಲೂ ಅದು ಸಾಧ್ಯವಿಲ್ಲ. ಒಳಗಿನ ಆಧ್ಯಾತ್ಮಿಕ ಸ್ಥಿತ್ಯಂತರದಿಂದಲೇ ಅದು ಸಾಧ್ಯ. ಇದು ಹಿಂದುಸ್ಥಾನದ ದಿಂದಲೇ ಆಗುವದು. ಬಹು ಯುಗಗಳಿಂದಲೂ ಈಶ್ವರನು ಭರತಖಂಡವನ್ನು ಯೋಗಭೂಮಿಯಾಗಿ ಕಾದಿಟ್ಟಿದ್ದಾನೆ. ಜಗತ್ಕಲ್ಯಾಣದ ಕಾಲದಲ್ಲಿ ಹಿಂದುಸ್ಥಾನದ ಯೋಗಿಗಳು ಬಹಿರಂಗದಲ್ಲಿ ಲೋಕಾಂತಕ್ಕೆ ಬರುತ್ತಾರೆ. ಆದರೆ ಜಗತ್ತಿನ ದುರವಸ್ಥೆಯ ಕಾಲದಲ್ಲಿ ಅವರು ಗಿರಿದರಿಗಳಲ್ಲಿ ಸೇರಿಕೊಂಡು ಏಕಾಂತ ಮಗ್ನರಾಗಿರುತ್ತಾರೆ."

'ಅರವಿಂದ ಮಂದಿರದಲ್ಲಿ' ಎಂಬ ಸಂಭಾಷಣದಲ್ಲಿ ಶ್ರೀ ಅರವಿಂದರು ೧೯೨೦ರಲ್ಲಿ ತಮ್ಮವರೊಬ್ಬರಿಗೆ ಇದೇ ಮಾತನ್ನು ವಿವರಿಸಿದುದು ಹೇಗೆಂದರೆ:—

“ ನಾಳೆ ಭರತಖಂಡವು ಎಂಥ ವಿಪುಲ ಕಾರ್ಯಭಾರವನ್ನು ವಹಿಸಬೇಕಾಗಿರುವದೆಂಬದರದೇ ಸೂಚನಾ ಸ್ವರೂಪವಾಗಿ ಸಮಗ್ರ ಜಗತ್ತಿನಲ್ಲಿ ಒಂದು ಮಿಸುಕು ಆರಂಭವಾಗಿದೆ. ಮುಂದಿನ ೩೦-೪೦ ವರ್ಷಗಳೊಳಗಾಗಿ ಜಗತ್ತಿನಲ್ಲಿ ವಿಪುಲವಾಗಿ ಮಾರ್ಪಾಡಾಗುವದು. ಎಲ್ಲವೂ ತಿರುವು ಮುರುವು ಆಗಿಬಿಡುವದು. ಆ ಬಳಿಕ ಕಟ್ಟಕಡೆಗೆ ಎದ್ದು ನಿಲ್ಲುವ ಜಗತ್ತಿನಲ್ಲಿ ಭಾರತ ಸಂಸ್ಕೃತಿಯೇ ಜಗತ್ತಿನ ಸಂಸ್ಕೃತಿಯಾಗುವದು. ಈ ಭವಿಷ್ಯತ್ ಭಾರತದ ಕಾರ್ಯವು ಕೇವಲ ಭಾರತದ ಸಲುವಾಗಿ ಇರದೆ ಸಮಸ್ತ ಜಗತ್ತಿನ ಸಲುವಾಗಿ ಇದೆ. ಆದಕ್ಕೆಂತಲೇ ಭರತಖಂಡವು ಪೂರ್ಣಮಾನವರನ್ನು ಸಿದ್ಧಪಡಿಸಬೇಕಾಗಿದೆ. ಯೋಗಿಗೆ ಎಲ್ಲವೂ ಶಕ್ಯ. ಶಿಕ್ಷಣ, ಸಮಾಜ, ರಾಜನೀತಿ, ಶಿಲ್ಪ ಮತ್ತು ವಾಣಿಜ್ಯ ಮುಂತಾದ ಸರ್ವ ಕ್ಷೇತ್ರಗಳಲ್ಲಿ ಅವನ ಪ್ರತಿಭೆಯು ಅಪೂರ್ವವಾದದ್ದು. ಅವನು ಈ ಎಲ್ಲ ಕ್ಷೇತ್ರಗಳಲ್ಲಿ ವಿಚಿತ್ರವಾದ ಉತ್ಪಾದನೆಯನ್ನು ಮಾಡಬಲ್ಲನು. ಆದರೆ ಆತನು ಯೋಗದ ಮುಖಾಂತರವಾಗಿಯೇ ಜಗತ್ತಿನಲ್ಲಿ ಒಂದು ಹೊಸ ರಚನೆಯನ್ನು ಮಾಡಲು ಹಾರಯಿಸುವನು. ಯೋಗದ ಪ್ರಕಾಶಸ್ವರೂಪವಾಗಿ ಇರುವ ಪರಿಪೂರ್ಣ ಕಾರ್ಯದ ಮೇಲೆಯೇ ಜಗತ್ತಿನ ನಾಳಿನ ನವಸೃಷ್ಟಿಯು ಅವಲಂಬಿಸಿದೆ. ಅದು ಬಹು ವಿಶಾಲವಾದ ಕಾರ್ಯವು. ಪೂರ್ಣ ಮಾನವರಿಂದಲೇ ಆ ಪೂರ್ಣ ಕಾರ್ಯವು ಜಗತ್ತಿನಲ್ಲಿ ಆಗಬೇಕಾಗಿದೆ. ಎಲ್ಲಿಯವರೆಗೆ ಪೂರ್ಣ ಮಾನವರು ಉದಯಿಸುವದಿಲ್ಲವೋ ಅಲ್ಲಿಯ ವರೆಗೆ ಎಂದೂ ಕಾರ್ಯವೂ ಪೂರ್ಣವಾಗುವದಿಲ್ಲ. ”

ಇನ್ನೊಂದೆಡೆಯಲ್ಲಿ ಯೋಗೀಶ್ವರ ಅರವಿಂದರು ಹೇಳಿದ್ದೇನೆಂದರೆ—

“ ನನಗೆ ಲಕ್ಷಗಟ್ಟಲೆ ಶಿಷ್ಯರು ಬೇಕಾಗಿಲ್ಲ. ಒಂದು ನೂರು ಜನರು ಕ್ಷುದ್ರಅಹಂಕಾರ ಶೂನ್ಯರಾದ ಪೂರ್ಣಮಾನವರು ಪರಮೇಶ್ವರನ

ಯಂತ್ರಸ್ವರೂಪರಾಗಿ ಲಭಿಸಿದರೆ ಅಷ್ಟೇ ಸಾಕಾಗುವದು. ನಾನು ಗುರುವಾಗಲು ಅಪೇಕ್ಷಿಸುವದಿಲ್ಲ ಸದ್ಯದ ಕಾಲದ ಗುರು ಪದ್ಧತಿಯನ್ನು ನಾನು ನಂಬುವದಿಲ್ಲ. ನನ್ನ ಸ್ಪರ್ಶದಿಂದಲೇ ಜಾಗೃತರಾಗಲೊಲ್ಲರೇಕೆ, ಅಥವಾ ಇನ್ನಾರ ಸ್ಪರ್ಶದಿಂದಲೇ ಜಾಗೃತರಾಗಲೊಲ್ಲರೇಕೆ, ಅವರೆ ಒಳ-ಮಗ್ಗಲಿನಿಂದ ತಮ್ಮ ಸ್ವತಃದ ದೇವತ್ವವನ್ನು ಬೆಳಗಿಸಿಕೊಂಡು ಭಗವತ್ ಜೀವನವನ್ನು ಪಡೆದುಕೊಳ್ಳಲಿ. ಇದೇ ನನ್ನ ಪ್ರಾರ್ಥನೆ. ಅಂಥ ಮನುಷ್ಯರೇ ಈ ದೇಶವನ್ನು ಉದ್ಧರಿಸುವರು."

ಓಂ ಶ್ರೀ ಓಂ



# ನಮ್ಮ ಗ್ರಂಥಮಾಲೆಯ ಪೋಷಕರಾದ
# ಹಿ ತೈ ಷಿ ಗ ಳು .

—:0:—

ನಮ್ಮ ಗ್ರಂಥಮಾಲೆಗೆ ಪೋಷಕರಾಗಿ ಧನ ಸಹಾಯವನ್ನು ಮಾಡಿದ ಮತ್ತು ವಾಗ್ದಾನ ಮಾಡಿದ ನಮ್ಮ ಆತ್ಮೀಯರಿಗೆ ನಾವು ತುಂಬಾ ಕೃತಜ್ಞರಾಗಿದ್ದೇವೆ.

(೧) ಶ್ರೀಮತ್ **ಶಾಂತವೀರ ಸ್ವಾಮಿಗಳು ಬಬಲೇಶ್ವರ** ಇವರು ಪ್ರತಿ-ವರುಷ ಒಂದು ತಾತ್ವಿಕ ಗ್ರಂಥದ ಪ್ರಕಟನೆಯ ಭಾರವನ್ನು ವಹಿಸಿರುವರು.

(೨) ,, **ಸಂಗನಬಸವ ಸ್ವಾಮಿಗಳು ಬಂಥನಾಳ** ಇವರು ಒಂದು ತಾತ್ವಿಕ ಗ್ರಂಥದ ಪ್ರಕಟನೆಯ ಭಾರವನ್ನು— ವಹಿಸಿರುವರು.

(೩) ಶ್ರೀಯುತ ವಿಜಾಪುರದ ಧನಿಕ ಮಹಾಶಯರೊಬ್ಬರು 'ಮಿಲನ'ದ ಮುದ್ರಣದ ವೆಚ್ಚವನ್ನೆಲ್ಲ ಕೊಟ್ಟಿರುವರು.

(೪) ಶ್ರೀಮಂತ **ಬಾಬಾಸಾಹೇಬ ಸರದೇಸಾಯಿ ರಕ್ಕಸಗಿ** (ವಿಜಾಪೂರ) ಇವರು 'ಭಾರತೀಯ ನವಜನ್ಮ'ದ ಮುದ್ರಣದ ವೆಚ್ಚವನ್ನು ಕೊಟ್ಟಿರುವರು.

(೫) ಶ್ರೀಮಂತ್ **ಗುರುಪಾದೇಶ್ವರ ತತ್ವಜ್ಞಾನಮಂದಿರ ಮೈಂದರಗಿ,** ಈ ಸಂಸ್ಥೆಯವರು 'ಬಾಳಿನಲ್ಲಿ ಬೆಳಕಿ'ನ ಮುಪ್ರಣದ ಹಣದ ಭಾರವನ್ನು ತಾವು ವಹಿಸಿರುವರು.

(೬) ಮಹಾಮಹೋಪಾಧ್ಯಾಯರಾದ ಪ್ರಾಕ್ತನ ವಿಮರ್ಶ ವಿಚಕ್ಷಣ ರಾ|| ಬ|| **ಆರ್. ನರಸಿಂಹಾಚಾರ್ಯರು** M. A., M. R. A. S., **ಬೆಂಗಳೂರ** ಅವರುಗಳು ನಮ್ಮ ಗ್ರಂಥಮಾಲೆಗೆ ಆಕ್ಕರತೆಯಿಂದ ಸಹಾಯ ಮಾಡಲು ಒಪ್ಪಿದ್ದಾರೆ.

(೭) ಶ್ರೀಮಾನ್ **ಹ. ಬ. ಕೋಣ್ಣೂರ ಎಮ್. ಎ., ವಿಜಾಪೂರ** ಇವರು ಒಂದು ನೂರು ರೂಪಾಯಿಗಳ ದಾನ್ಗಾನ ಮಾಡಿರುವರು.

(೮) ಜ್ಞಾನೋದಯ ನಾಟಕ ಮಂಡಳಿಯ ಒಡೆಯರಾದ ಶ್ರೀಮಾನ್ **ಆರ್. ಜಿ. ಹೋಳಗಿ ಹಂದಿಗನೂರ** ಇವರು ೨೫ ರೂಪಾಯಿಗಳನ್ನು ಸಹಾಯ ಮಾಡಿದ್ದಾರೆ.

(೯) ಶ್ರೀಮಂತ **ರಾ. ಚಿಂ. ನಾಡಗೌಡರು ಹಲಸಂಗಿ** ಇವರ ೨೫ ರೂ.ಗಳ ದಾನ್ಗಾನ.

(೧೦) ಶ್ರೀಯುತ **ಶಿವಲಿಂಗಪ್ಪ ಸರಸಂಬಿ ಚಡಚಣ** ಇವರು ೨೫ ರೂ.ಗಳನ್ನು ಸಹಾಯ ಮಾಡಿದ್ದಾರೆ.

---

## ನಮ್ಮ ಸಹಾಕರಿಂದ ನಗದು ಹಣ ಬಂದದ್ದು.

| | | ರೂ. |
|---|---|---|
| ೧ | ಶ್ರೀ. ಎಸ್. ವ್ಹಿ. ಕುಲಕರ್ಣಿ ಹಲಸಂಗಿ. .... .... | ೧೫ |
| ೨ | ,, ತಂಬಾಕೆ ಸಿದ್ಧರಾಮಪ್ಪನವರು ತಾಳಿಕೋಟೆ.... .... | ೧೧ |
| ೩ | ,, ಬಿ. ಡಿ. ಕೋ-ಆಪರೇಟಿವ್ಹ ಸೆಂಟ್ರಲ್ ಬ್ಯಾಂಕ ಲಿ., ವಿ. | ೧೦ |
| ೪ | ,, ವೀರಶೈವ ತರುಣ ಸಂಘ ಚೊಳಚಗುಡ್ಡ. .... | ೧೦ |
| ೫ | ,, ನಿಂಗಪ್ಪ ಬಸಪ್ಪ ದೇಸಾನಿ ಅ। ಮಾ। ಕಮತಗಿ..... | ೧೦ |
| ೬ | ,, ದಶರಥ ಪಾರ್ಶ್ವನಾಥ ಮಣಿ ಅ। ಮಾ। ಕಮತಗಿ.... | ೧೦ |
| ೭ | ,, ಗವಗೆಪ್ಪ ಗುರುಸಿದ್ದಪ್ಪ ಜೈನಾಪೂರ ಅ।ಮಾ। ,, .... | ೧೦ |
| ೮ | ,, ಗುರಪ್ಪ ಸಾತಪ್ಪ ಅಂಗಡಿ ಹೆ। ಮಾ। ಕಮತಗಿ.... | ೧೦ |
| ೯ | ,, ಗುರುಪಾದಯ್ಯ ವೀರಭದ್ರಯ್ಯಾ ಹಿರೇಮಠ ಹೆ। ಮಾ। ಬೂದೀಹಾಳ .... | ೫ |
| ೧೦ | ,, ಬೆಲ್ಲದ ಚೆನ್ನಪ್ಪನವರು ಚಿತ್ತವಾಡಗಿ. .... .... | ೫ |
| ೧೧ | ,, ಶಾಕಂಭರೀ ವಾಚನಾಲಯ ಇಲಕಲ್ಲ. .... .... | ೫ |
| ೧೨ | ,, ದೊಡ್ಡಪ್ಪ ತಿಪ್ಪಣ್ಣಾ ನಾಗರಾಳ ಹುನಗುಂದ .... | ೫ |
| ೧೩ | ,, ಗುರುಬಸವಾರ್ಯ ಮುನಿಯಯ್ಯ ಮಠ— ಇಂಗ್ಲಿಷ ಶಾ। ಮಾ। ಹುನಗುಂದ .... | ೫ |
| ೧೪ | ,, ಸಿದ್ಧನಗೌಡಾ ರಾಮನಗೌಡಾ ಭಗವತಿ, ಹೆ। ಮಾ।.... | ೫ |
| ೧೫ | ,, ವಿಠ್ಠಲರಾವ ರಾಘವೇಂದ್ರರಾವ ದೇಸಾಯಿ- ವಕೀಲ ಹುನಗುಂದ. .... .... | ೫ |
| ೧೬ | ,, ಸೆಕ್ರೆಟರಿ ಜನರಲ್ ಲಾಯಿಬ್ರರಿ ಹುನಗುಂದ .... | ೫ |
| ೧೭ | ,, ಸಂಗಯ್ಯ ಬಸಯ್ಯ ಚೌಕಿಮಠ ಅವರು— ಅ। ಮಾ। ಕಮತಗಿ. .... | ೫ |
| ೧೮ | ,, ಗುರುಬಾಳಪ್ಪನವರು ಜೀರಂಕಲಗಿ ಚಡಚಣ. .... | ೫ |

೧೯ ಶ್ರೀ ಬಿ ಕೆ. ಧಂವರಗಿಯವರು ವಿಜಾಪೂರ. .... .... ೫
೨೦ ,, ಡಿ. ಟಿ. ಗಾಣಿಗೇರ ಹುನಗುಂದ. .... .... .... ೫
೨೧ ,, ಸಿದ್ಧರಾಮಪ್ಪ ಚೆನ್ನಪ್ಪ ಗೋಣಿ, ಕಮತಗಿ. .... ೫
೨೨ ,, ಕೇ. ಪಿ. ಗದಗ, ಪಂಚಾಂಟಿ ಗದಗ. .... .... ೫
೨೩ ,, ಅನಂತರಾವ ಜಾಲೀಹಾಳ, ಗದಗ. .... .... .... ೫
೨೪ ,, ವ್ಹಿ. ಎ. ಶೆಟ್ಟಿ, ಗದಗ. ಕಾಟನಸೇಲ ಸೊಸಾಯಿಟಿ ... ೫
೨೫ ,, ಬಸವಪ್ಪ ಬಳ್ಳಾರಿ ಗದಗ .... .... .... .... ೫
೨೬ ,, ಅಂಗಡಿ ಚೆಂಬಣ್ಣನವರು ಗದಗ. .... .... .... ೫
೨೭ ,, "ಜಿ. ಟಿ. ಪಿ." .... .... .... .... .... .... ೫
೨೮ ,, "ಪಿ. ಎಸ್. ಪಿ." .... .... .... .... ... ೫
೨೯ ,, ಡಾಗಾ ರಾಮಚಂದ್ರ ಕೋಟಿಯ ಬನ್ನಟ್ಟಿ. .... .... ೫
೩೦ ,, ಅಬಕಾರ ಚನಮಲ್ಲಪ್ಪನವರು ಬನ್ನಟ್ಟಿ. .... .... ೫
೩೧ ,, ಆರ್. ಎಸ್. ಮನಭಾವಿ ಹೆಲಸಗಿ. .... .... ೫
೩೨ ,, ಕುಷ್ಟಗಿ ರಾಮಚಂದ್ರಪ್ಪನವರು ಗದಗ. .... .... ೫
೩೩ ,, ಬಿ. ಎಸ್. ಸಜ್ಜನರವರು B.A.,LL.B., —
ವಕೀಲರು ವಿಜಾಪೂರ. .... ೫
೩೪ ,, ಡಾ. ತಿ. ವ್ಹಿ. ಕಲ್ಲೊಳ್ಳಿ M.B.B.S. ಗದಗ. .... ೫
೩೫ ,, ಕೋಟಿ ಕೊಟ್ಟಪ್ಪನವರು B.A.,LL.B.,—
ವಕೀಲರು ಗದಗ. .... ೬
೩೬ ,, ಸಿ. ಎಸ್. ಹುಲಕೋಟಿ B.A.,LL.B.,—
ವಕೀಲರು ಗದಗ. .... ೫
೩೭ ,, ಕೆ. ಎಸ್. ಶಾಂತಗಿರಿ, B. A., LL. B.,—
ವಕೀಲರು ಗದಗ. .... ೫
೩೮ ,, ವೀ. ಗು. ರೇವತಗಾವ ಬಳ್ಳೊಳ್ಳಿ, .... ೫
೩೯ ,, ಶಾಂತಪ್ಪ ಸಂಗಪ್ಪ ಎಳಮೇಲಿ, ವರ್ತಕರು ಗದಗ. .... ೫
೪೦ ,, ಹಣಮಂತಸಾ ಬೇವಿನಕಟ್ಟಿ ಗದಗ .... .... ೫

೪೧ ಶ್ರೀ ಜೋಶಿ ಸ್ವಾಮಿರಾಯರು B. A., LL. B.,—
ವಕೀಲರು ಗದಗ. .... ೫

೪೨ ,, ಸಿ. ಜಿ. ಜಗತಿ ಹೆ| ಮಾ| ಸಿಂದಗಿ. .... .... .... ೫

೪೩ ,, ರಾವಸಾಹೇಬ ಮಾನವಿ ಸಿದ್ಧರಾಮಪ್ಪನವರು ಗದಗ.... ೫

೪೪ ,, ಕುಸ್ಟಗಿ ಗೋವಿಂದರಾಯರು ಗದಗ. .... .... ೫

೪೫ ,, ಮಯಿಲ್‌ಗೋಳ ರಘುನಾಥರಾಯರು ಗದಗ. .... ೫

೪೬ ,, ನಾ. ಗು. ಅಷ್ಟೆ ಮಾಸ್ತರರು ಮಿರಗಿ. .... .... ೫

೪೭ ,, ವೇ. ಕೃ. ಅಗರಖೇಡರವರು ಅ| ಮಾ| ಜಡಜಣ.... ೫

೪೮ ,, ಸಿ. ಬ. ಜಮುಖಂಡಿಯವರು ಹೆ| ಮಾ| ಭತ್ತಗುಣಕಿ.... ೫

೪೯ ,, ಘೊ. ವಾ. ಪುರಂಧರೆಯವರು ಅ| ಮಾ| ಇಂಡಿ. .... ೫

೫೦ ,, ಬಿ. ಬಿ. ಪಾಟೀಲರು ಇಂಡಿ,ಡಿ.ಎಲ್. ಬಿ. ಮೇಂಬರರು.... ೫

೫೧ ,, ಡಾ, ಎಚ್. ಬಿ. ಕೊಣ್ಣೂರರವರು ಗದಗ. .... .... ೫

೫೨ ,, "ನಾ. ಪ. ಸಿ." .... .... .... .... .... ೫

೫೩ ,, ಎಸ್. ಎಸ್. ತಪಶೆಟ್ಟಿಯವರು ಬಾಗಲಕೋಟೆ. .... ೫

೫೪ ,. ಅಡವೆಪ್ಪನವರು ಶಿವಪ್ಪನವರು ತುಪ್ಪದ, ಗದಗ. .... ೫

೫೫ ,, ಮುದಿಬಸಪ್ಪನವರು ವಿರಬಸಪ್ಪನವರು ಬಳ್ಳೊಳ್ಳಿ,ಗದಗ. ೫

೫೬ ,, ತ್ರಿ. ನೇ. ಕುಲಕರ್ಣಿ ನಾಲವಾಡಗಿ, ಹೆ| ಮಾಸ್ತರರು.... ೫

೫೭ ,, ಆರ್. ಬಿ ಕಲ್ಲೂರ ದೇಸಾಯಿಯವರು ಬಾಗೇವಾಡಿ ... ೫

೫೮ ,, ಆರ್. ಬಿ. ಆಲಬಾಳ ಬಿ. ಎ. ಸುಫರವಾಯಿಝುರ—
ವಿಜಾಪೂರ .... ೫

೫೯ ,, ಲಿಂಗಪ್ಪ ಶಿವ್ಪೂರ, ಅಥಣಿ .... .... .... .... ೫

೬೦ ,, ವಿಠಲ ಹುಕ್ಕೇಪ್ಪ ಅಂಕಲಗಿ, ಮಾಸ್ತರ ಬಬಲಾದ. .... ೫

---

## ಸಹಾಯ ಮಾಡಲೊಪ್ಪಿದ ಮಹನೀಯರು

---

೧ ಶ್ರೀ. ಘೆ. ಗು. ಮುತಾಲಿಕ ಹೆ| ಮಾ| ಇಂಡಿ. .... .... ೫

೨ ,, ವಿ. ಕೃ. ಪಲ್ಮಾರಿ, ಮಾಸ್ತರರು ಇಂಡಿ. .... .... ೫

೩ ,, ಗ. ಗು. ದೀಕ್ಷಿತ ಮಾಸ್ತರರು ಝಳಕಿ. .... .... ೫

೪ ,, ಸ. ಸಾ. ಕಾಳೆ, ಅ| ಮಾ| ಚಡಚಣ. .... .... ೫

೫ ,, ರಾಯನಗೌಡರು ಪಾಟೀಲ ಸರ್ಕಲ್ ಇನ್ಸಪೇಕ್ಟರರು—
ಇಂಡಿ. .... ೫

೬ ,, ಅ. ಫೇ. ರಜಪೂತ ಮಾಸ್ತರರು ಜಿನಕನಹಳ್ಳಿ. .... ೫

೭ ,, ಅ. ಸ. ಪಾಟೀಲ ಅ| ಮಾ| ನಿವರಗಿ .... .... ೫

೮ ,, ಸಿದ್ಧರಾಮಪ್ಪ ಹರಿಜನ ಶಾಲಾಮಾಸ್ತರರು. .... ೫

೯ ,, ಶಾ. ಗಿ. ಬಗಲಿ, ಅ| ಮಾ| ಇಂಡಿ. .... .... ೫

೧೦ ,, ಸಿದ್ದಪ್ಪನವರು ವ ಬಳೂಟಗಿ ಬಸವಶೆಟ್ಟೆಪ್ಪನವರು—
ಹುನಗುಂದ. .... ೫

೧೧ ,, ಚನಮಲ್ಲಪ್ಪ ಗದಿಗೆಪ್ಪ ಶೆಟ್ಟರ ಪಾಟೀಲರು ಕಮತಗಿ.... ೫

೧೨ ,, ಎಲ್. ವ್ಹಿ. ಶಿರೋಳ, B. A., LL. B., —
ವಕೀಲರು ಗದಗ.... ೫

೧೩ ,, ಹಾವನಹಳ್ಳಿ ಮಾಸ್ತರರು M. A., ಗವ್ಹರ್ನಮೆಂಟ—
ಹಾಯ ಸ್ಕೂಲ ವಿಜಾಪೂರ.... ೫

೧೪ ,, ಆರ್. ಆರ್. ಕುಪ್ಪಸದ ಹೆಡ್ಮಾಸ್ತರರು —
ಮುನಸಿಪಲ್ ಹಾಯಸ್ಕೂಲ ಹಾವೇರಿ.... ೫

೧೫ ,, ಗುರುಬಸವಪ್ಪ ಶೀಲವಂತರ, ಬನಶಂಕರಿ ಬಾಲಸಂಘ
ಕೊಟ್ಟೂರ.... ೫

೧೬ ಶ್ರೀ. ಜೋರಾಪೂರ ಗುರುರಾಯರು B. A., LL. B.,— ಬಾಗಲಕೋಟೆ.... ೫

೧೭ ಶ್ರೀ. ಜಂಗಿನ ಮುರಗೈಯ್ಯನವರು ಬಾಗಲಕೋಟೆ. .... ೫

೧೮ ,, ಪಿ. ಕೆ. ಸೂಲಾಪೂರ ಬನಹಟ್ಟಿ. .... .... .... ೫

೧೯ ,, ಬಿ. ಎಂ. ಪಟ್ಟಣಶಿಟ್ಟೈಯವರು ಬದಾಮಿ .... .... ೫

೨೦ ,, ರಾಚಪ್ಪಣ್ಣಾ ಮೇಲಕೇರಿ ಅವರು ಒಳಸಂಗ. .... ೫

೨೧ ,, ಗು. ಅ. ಕುಲಕರ್ಣಿ, ಹೆ| ಮಾ| ಅಗರಖೇಡ .... ೫

೨೨ ,, ಸ್ವಾಮಿರಾವ ಕುಲಕರ್ಣಿ, ಹಾವಿನಾಳ. .... .... ೫

೨೩ ,, ಅಣ್ಣಾರಾವ ಪಾಟೀಲ, ಅರ್ಜನಾಳ. .... .... ೫

೨೪ ,, ಲ. ಘೀ. ಗುಮಾಸ್ತೆ ಹೆ| ಮಾ| ಬರಡೋಲ.... .... ೫





ನಿಮಗೆ

ಮುದ್ದಾದ

ಮುದ್ರಣವು

ಬೇಕೇ?

ಮುದ್ದಾದ ಮುದ್ರಣದ ಮಂದಿರ

ದಿ

## ಬಾಗಲಕೋಟ ಪ್ರಿಂಟಿಂಗ್ ವರ್ಕ್ಸ್,

ಬಾಗಲಕೋಟ.

## ಹಳ್ಳಿಯ ಆಳು.

ಈ ಮಾಸಪತ್ರಿಕೆಯಲ್ಲಿ ಹಳ್ಳಿಯ ಜನರಿಗುಪಯುಕ್ತವಾಗುವ ಒಳ್ಳೇ ಲೇಖನಗಳು ಬರುತ್ತವೆ. ಪ್ರತಿ ಒಬ್ಬ ಹಳ್ಳಿಯ ಮನುಷ್ಯನು ಇದನ್ನು ಅವಶ್ಯವಾಗಿ ಓದಲೇಬೇಕು. ಸಹಕಾರ, ಒಕ್ಕಲತನ, ಗ್ರಾಮ ಸುಧಾರಣೆ ಇವುಗಳಿಗೆ ಸಂಬಂಧಿಸಿದ ಲೇಖ, ಕಥೆ, ಕವಿತೆ, ನಾಟಕ ಮೊದಲಾದವುಗಳು ಪ್ರಕಟವಾಗುತ್ತವೆ. ವಾ. ಚಂದಾ.

ವಿಳಾಸ:— 'ಹಳ್ಳಿಯ ಆಳು' ಕಾರ್ಯಾಲಯ.
ಮಾರುತಿಬೀದಿ, ಬೆಳಗಾಂವಿ.

# ಒಪ್ಪೋಲೆ.

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೧ | ೨ | ಒಂದನೇಯ | ಮೊದಲನೆಯ |
| ೮ | ೩ | ಚಾತುರ್ಯೆಯಿಂದ | ಚಾತುರ್ಯದಿಂದ |
| ೧೦ | ೧೧ | ಕಾರ್ಯುನ್ಮಾದವು | ಕಾರ್ಯೋನ್ಮಾದವು |
| ೧೦ | ೨೩ | ಧರ್ಮದಾದಿ | ಧರ್ಮಾದಿ |
| ೧೩ | ೪ | ಸಯ್ಯಾಯ | ಸಹಾಯ. |
| ೨೧ | ೩ | ಪಂಥೀಯು | ಪಂಥೀಯ |
| ೨೩ | ೮ | ಕಡಮ | ಕಡಿಮೆ |
| ೪೭ | ೮ | ಪ್ರವಣಿಸಿದ್ದರೂ | ಪವಣಿಸಿದ್ದರೂ |
| ೪೭ | ೧೫ | ಇರೋಪಿಯನ | ಇರೋಪಿನ |
| ೪೮ | ೬ | ಕಾವ್ಯಯ | ಕಾವ್ಯವು |
| ೪೮ | ೨೩ | ಕಾವ್ಯಕಲಾಪನೆ | ಕಾವ್ಯಾಲಾಪನೆ |
| ೪೯ | ೧೯ | ಶ್ರುಂತಿ | ಶ್ರುತಿ |
| ೬೭ | ೬ | ಉರ್ಮಿಯು | ಊರ್ಮಿಯು |
| ೭೦ | ೧ | ಆರವಿಂದ | ಅರವಿಂದ |
| ೭೬ | ೧ | ಆಧ್ಯಾತ್ಮ | ಅಧ್ಯಾತ್ಮ |
| ೭೬ | ೪ | ಶಾಂತಿಯೊಂದು | ಶಾಂತಿಯೆಂದು |